




# ಪ್ರಾಣಪಕ್ಷಿ

ಕೋ. ಚೆನ್ನಬಸಪ್ಪ

ಸಜೀವ ಸಾಹಿತ್ಯಮಾಲೆ: ೩

# ಪ್ರಾಣಪಕ್ಷಿ

(ಕವನ ಸಂಗ್ರಹ)

ಕೋ. ಚೆನ್ನಬಸಪ್ಪ

೧೯೫೩

ಸಜೀವ ಸಾಹಿತ್ಯ ಮಾಲೆ

ಬಳ್ಳಾರಿ.

# ಹಿತವಚನ

ಮೈಸೂರು
ತಾ|| ೧೭-೯-೫೩

ಪ್ರಿಯ ಮಿತ್ರರೆ,

ನಮಸ್ಕಾರ. ೧೪-೯-೫೩ರಲ್ಲಿ ನೀವು ಆದರದಿಂದ ಬರೆದ ಪತ್ರವೂ, ಅದರೊಡನೆ ವಿಶ್ವಾಸದಿಂದ ಕಳುಹಿಸಿದ ಕೃತಿಯೂ ತಲುಪಿದುವು.

ನಿಮ್ಮ 'ಪ್ರಾಣಪಕ್ಷಿ'ಗೆ ಇದೊ, ಈ ಪ್ರಾಣಪಕ್ಷಿ ಸ್ವಾಗತ ಬಯಸುತ್ತದೆ!

ತನ್ನ ಚೊಚ್ಚಲು ಕೃತಿ ಹೊರಗೆ ಬರುವಾಗ ಜನ ಅದನ್ನು ಹೇಗೆ ಕಾಣಬಹುದೆಂದು ಕವಿ ಕುತೂಹಲದಿಂದಿರುವುದು ಸಹಜವೇ. ಕೃತಿ ಪ್ರಕಟವಾಗುವ ಮುಂಚೆ ಅದರ ಕ್ಷೇಮ ಚಿಂತನೆಯ ಹೊರೆ ಹೊಣೆ ಕೃತಿಗಾರನದು; ಅದು ಹೊರ ಬಿದ್ದ ಮೇಲೆ ಸಹೃದಯರದು, ಲೋಕದ್ದು. ಕಾವ್ಯದೇವಗಂಗೆಯ ಉಗಮಸ್ಥಾನ ಜನ-ಹೃದಯದ ಮಾನಸ ಸರೋವರ, ಗಮ್ಯಸ್ಥಾನವೂ ಜನಹೃದಯದ ಮಾನಸ ಸರೋವರವೆ. ಮಾನವನ ಚಿತ್ತಪಶ್ಯಕ್ತಿಮೂಲವಾದ ಬುದ್ಧಿ ಭಾವಗಳು ಇಂದ್ರಿಯಾನುಭವ ಅಥವಾ ಅತೀಂದ್ರಿಯಾನುಭವದ ಮೂಲಕ ಕವಿಯ ಚಿದಾಕಾಶವನ್ನು ಸೇರಿ, ಮತ್ತೆ ವಿವಿಧ ಪ್ರತೀಕೆಗಳ ಮೂಲಕ ಅಭಿವ್ಯಕ್ತಗೊಂಡು ಜನ ಹೃದಯದ ಸಾಗರವನ್ನು ಸೇರುತ್ತವೆ. ಕವಿ ಕೇವಲ ನಿಮಿತ್ತ: ಅವನೊಬ್ಬ ಲಿಪಿಕಾರ. "ಕವಿಯ ಹೃದಯವೊಂದು ವೀಣೆ, ಲೋಕವದನು ಮಿಡಿವುದು" ಆದರೆ ಕವಿಕೃತಿ ಸಂಪೂರ್ಣವಾಗಿ ದೋಷ ರಹಿತವಾದುದು, ಸರ್ವ ಶ್ರೇಷ್ಠವಾದುದು ಎಂದು ಹೇಳುವಂತಿಲ್ಲ. ಏಕೆಂದರೆ ನಿಮಿತ್ತಮಾತ್ರನಾದ ಕವಿಯಲ್ಲಿ ಕಾಣುವ ಲೋಪದೋಷಗಳು ಕವಿಕೃತಿಯಲ್ಲಿಯೂ ಕಾಣಬಹುದು. ಅಂಥ ಲೋಪದೋಷಗಳಿದ್ದರೆ ಸಹೃದಯವಿಮರ್ಶಕ ಸದ್ಭಾವನೆಯಿಂದ ಎತ್ತಿ ತೋರಿಸಲಿ. ಆದರೆ ವಿವೇಚನಾ ಸಾಮರ್ಥ್ಯವುಳ್ಳ, ನಿಷ್ಪಕ್ಷಪಾತ ದೃಷ್ಟಿಯ ಸಹೃದಯ ವಿಮರ್ಶಕರು ವಿರಳ. ಚಂದ್ರನಲ್ಲಿ ಕಳಂಕವನ್ನು ಕಬ್ಬಿನಲ್ಲಿ ಗಂಟನ್ನು, ಗುಲಾಬಿ ಗಿಡದಲ್ಲಿ ಮುಳ್ಳನ್ನು, ಕೋಗಿಲೆಯಲ್ಲಿ ಕಪ್ಪನ್ನು ಕಾಣುವ ಜನ ಅವರು.ರಂಧ್ರಾನ್ವೇಷಣೆಯೆ ಅವರ ಪರಮಧ್ಯೇಯ. ಇರಲಿ....

ನಾನಂತು 'ಪ್ರಾಣಪಕ್ಷಿ'ಯ ಭಾವ ಗೀತೆಗಳನ್ನು ಎರಡು ಬಾರಿ ಓದಿದ್ದೇನೆ. ಅಲ್ಲಿರುವ ಎಲ್ಲ ಗೀತೆಗಳೂ ಉತ್ತಮ ದರ್ಜೆಯವೆಂದು ನನಗೆ ಅನಿಸಿಲ್ಲ. ಬಹುಶಃ ಅಂಥ ಕೆಲವು ಹಿಂದೆ ಬರೆದುವೆಂದು ಕಾಣುತ್ತದೆ. ಮೊದಮೊದಲ ಗೀತೆಗಳಿಗೂ ಕೊನೆಕೊನೆಯ ಗೀತೆಗಳಿಗೂ ಭಾವಾನುಭವ, ವಿಚಾರ ವಿಧಾನ ವಿಷಯ ನಿರೂಪಣೆ, ಕಲ್ಪನಾ ಸೌಂದರ್ಯ, ಶೈಲಿಗಳಲ್ಲಿ ತುಂಬ ;ಅಂತರ ಕಾಣುತ್ತದೆ. ಇಷ್ಟು ಮಾತ್ರ ನಿಜ: ಅವುಗಳಲ್ಲಿ ಹಲವು ನನಗೆ ಮೆಚ್ಚಿಕೆಯಾಗಿವೆ ನನ್ನ ಹೃದಯವನ್ನು ಹೊಕ್ಕಿವೆ; ವಿಚಾರವನ್ನು ಕೆರಳಿಸಿವೆ. ಇದು ಮಿತ್ರ ಪಕ್ಷಪಾತದ ಮಾತಲ್ಲ; ಕಾವ್ಯ ಪಕ್ಷಪಾತದ ಮಾತು. ಕೆಲವು ಕವನಗಳಲ್ಲಿ ಹಿರಿಯ ಕವಿಗಳ ಭಾವದ ಅನುಕರಣೆಯಿದೆ; ಆ ಅನುಕರಣೆ ಹೃದಯಂಗಮವಾಗಿದೆ. ಅದು ಕೇವಲ ಅಂಧಾನುಕರಣೆಯಲ್ಲ, ಅನುಭವಾತ್ಮಕವಾದ ಅನುಕರಣೆ. ಅದನ್ನು ಭಾವಾನುಕರಣೆಯೆನ್ನುವುದಕ್ಕಿಂತ ಭಾವ ಪುನರ್ಜನ್ಮ ಎನ್ನಬಹುದು. 'ಅವನ ಹಾಡನೆ ಹಾಡು' 'ಅಳಿಸಿ ಬಿಡು ಕಳಿಸಿ ಬಿಡು,' ನಾನಳಿದು ಹೊಗಳ್ಳೆ' ಮೊದಲಾದ ಗೀತೆಗಳನ್ನು ಈ ಸಂದರ್ಭದಲ್ಲಿ ಉದಾಹರಿಸಬಹುದು

ಈ ಗೀತೆಗಳಲ್ಲಿ ಹಲವು ನನಗೆ ಮೆಚ್ಚಿಕೆಯಾಗಿವೆ ಎಂದು ಹೇಳಿದೆ. ಅಹುದು. ನಿಜಕ್ಕೂ ಮೆಚ್ಚಿದ್ದೇನೆ. ಏಕೆ ಗೊತ್ತೆ? ಅವುಗಳಲ್ಲಿ ನೂತನ ಕಲ್ಪನಾ ವಿಲಾಸವಿದೆ; ನವೀನ ಭಾವ ವೀಚಿಗಳ ಮೆರವಣಿಗೆ ಇದೆ; ಸ್ವತಂತ್ರ ವಿಚಾರ ಸರಣಿಯಿದೆ; ವಾಸ್ತವ ಜೀವನದ ಚಿತ್ರಣವಿದೆ; ಮೇಲಾಗಿ ಇವೆಲ್ಲವುಗಳ ಸಮರಸತೆಯನ್ನು ಸಾಧಿಸಿದೆ. ಅಸಾಧ್ಯವನ್ನು ಸಾಧಿಸಲೆಳಸುವ ಪ್ರಯತ್ನ ನಿಷ್ಫಲವೆಂಬ ಭಾವ 'ಹಣತೆ'ಯಲ್ಲಿ ಎಷ್ಟು ಸಾರಸ್ಯವಾಗಿ ವ್ಯಕ್ತಗೊಂಡಿದೆ! 'ಮೌನ ವ್ರತ'ದ ಮಹಿಮೆಯನ್ನು ಕುರಿತ ಗೀತದಲ್ಲಿ ಬರುವ,

"ಮನದ ಮನೆ ಕಸ ಗುಡಿಸಿ ಕಿಟಿಕಿ ಬಾಗಿಲು ತೆರೆಯೆ
ಗಾಳಿ ಬೆಳಕುಗಳಿಂದ ಗೃಹವಾಸಿ ಸುಖವ ಪಡೆವನ್!
ಇಲ್ಲದಿರೆ ಗುಡಿಸುವಾಗಲೆ ಮನೆಯ ಕದ ತೆರೆಯೆ
ಗಾಳಿಯೊಳನುಗ್ಗಿ ಮತ್ತಿಷ್ಟು ಕಸವ ತಂದೊಟ್ಟೀತು"

ಈ ಉಪಮೆ ರಮ್ಯವಾಗಿದೆ, ಧ್ವನಿ ಪೂರ್ಣವಾಗಿದೆ, ನವನವೀನವಾಗಿದೆ. 'ನಮೋ, ನಿನಗೆ ಭಿಕ್ಷುಕಿಯೆ' ಭಾವಗೀತೆಯಂತು ಅರ್ಥಗರ್ಭಿತವಾಗಿ, ಭಾವಪರಿಪ್ಲುತವಾಗಿ, ದರ್ಶನ ದೀಪ್ತವಾಗಿ, ಅತ್ಯಂತ ಹೃದಯಂಗಮವಾಗಿದೆ.

ಸಾಹಿತ್ಯದಲ್ಲಿ ಎಂದಿಂದಿಗೂ ನಿಲ್ಲುವಂತಹ ಗೀತೆಯದು. ಹೀಗೆಯೆ ಎಷ್ಟೋ ನಿದರ್ಶನಗಳನ್ನು ಉಲ್ಲೇಖಿಸಬಹುದು. ಆದರೆ ಪತ್ರ ದೀರ್ಘವಾಗುತ್ತಿದೆ ಪೂಜ್ಯ ಶ್ರೀ ಕುವೆಂಪು ಅವರು ಇವುಗಳ ಬಗ್ಗೆ ಹೇಳಿದ ಒಂದೆರಡು ಮಾತನ್ನು ಹೇಳದೆ ವಿಧಿಯಿಲ್ಲ: "ಈ ಸಂಕಲನದ ಹಲವು ಗೀತೆಗಳಲ್ಲಿ ಭಾವಾಂಶ, ಚಿಂತನಾಂಶಗಳ ಕೊರತೆಯಿಲ್ಲ. ರೂಪಾಂಶದ ಕಡೆಗೆ ಹೆಚ್ಚು ಗಮನಕೊಡಬೇಕಿತ್ತು. ಉದ್ದಕ್ಕು ಉತ್ಸಾಹದ ಬುಗ್ಗೆ ಚಿಮ್ಮುತ್ತಿದೆ. ಶ್ರೀ ಚೆನ್ನಬಸಪ್ಪನವರ ಮುಂದಿನ ಗೀತೆಗಳು ಮೇಲೆ ಹೇಳಿದ ಮೂರು ಕಾವ್ಯಾಂಶಗಳನ್ನು ಒಳಗೊಂಡು ಸಹೃದಯ ಮನೋರಂಜಕವಾಗುವುದರಲ್ಲಿ ಸಂದೇಹವಿಲ್ಲ."

ಗೆಳೆಯರೆ! ಈ ಕೃತಿಯ ಬಗ್ಗೆ ಯಾರು ಏನು ಬೇಕಾದರೂ ಹೇಳಲಿ! ಕವಿಗೂ ಕವಿ ಮಿತ್ರರಿಗೂ ಅವು ಮೆಚ್ಚಿಕೆಯಾದರೆ ಸಾಕು. ನನಗಂತು ಮೆಚ್ಚಿಕೆಯಾಗಿವೆ. ಹಿರಿಯ ಸಾಹಿತಿಯೊಬ್ಬರು ಮತ್ತೊಬ್ಬ ಮಿತ್ರ ಸಾಹಿತಿಯನ್ನು ಕುರಿತು ಹೇಳಿದ ಮಾತುಗಳನ್ನು ನೆನೆಸಿಕೊಡುತ್ತೇನೆ: "....ಕೃತಿಗಳು ಎಷ್ಟು ಕಾಲ ಬದುಕಿದ್ದಾವು? ಬಲ್ಲವರು ಬೇಕಾದಹಾಗೆ ಹೇಳಲಿ. ನನಗೆ ಆ ಚಿಂತೆಯಿಲ್ಲ. ನಾನಿರುವವರೆಗೆ ಅವು ಇರುತ್ತವೆ. ಏಕೆಂದರೆ ಅವು ನನಗೆ ಬೇಕಾದುವು." ಈ ಮಾತು ಎಂದೆಂದಿಗೂ ನಿಜ. ಇನ್ನೇನು ಬೇಕು. ನಿಮ್ಮ ಕೃತಿ ನನ್ನ ಪಾಲಿಗೆ 'ಸತ್ಯ'! ಆದರೆ ನಿಮ್ಮ ಕಾರ್ಯೋದ್ದೇಶ ಮಾತ್ರ ಅಚಲವಾಗಿರಲಿ! ನಿಮ್ಮ ಇಚ್ಛೆಯಂತೆಯೆ ನಿಮ್ಮ ಕಾವ್ಯಶಕ್ತಿ ಸದಾ ಲೋಕಗುರುವಿನ ಸೇವೆಗೆ ಮೀಸಲಾಗಿರಲಿ!

ತಮ್ಮವ

**ದೇ. ಜವರೇಗೌಡ.**

# ಸಹೃದಯರಿಗೆ

ಉದಯೋನ್ಮುಖ ಕವಿಗೆ ಅತ್ಯಗತ್ಯವಾಗಿ ಬೇಕಾದ ಹಿರಿಯರ ಆಶೀರ್ವಾದ, ಗುರುಗಳ ಮಾರ್ಗ ದರ್ಶಿತ್ವ, ಸಹೃದಯರ ಪ್ರೋತ್ಸಾಹ ನನ್ನ ಕಾವ್ಯ ಜೀವನದಲ್ಲಿ ಸಾಕಷ್ಟು ಪ್ರಮಾಣದಲ್ಲಿ ದೊರೆಯಲಿಲ್ಲ. ಕಳೆ ಹುಟ್ಟಿ ಬಹುದೆಂಬ ಭಯದಿಂದ ಬೆಳೆಯನ್ನೆ ಬೆಳೆಸಕೂಡದೆಂಬ ಮನೋಭಾವದವರ ಸಂಗ ನನಗಾಯಿತು. ಉದಯೋನ್ಮುಖ ಕವಿಗೆ ಸಂಶಯದ ಸೌಲಭ್ಯ, (Benefit of doubt) ಕೊಟ್ಟು ಕೆಲವುಕಾಲ ಆ ಕವಿಯನ್ನು ಬೆಳೆಯ ಗೊಡಬೇಕು. ಹಾಗೆ ನನ್ನನ್ನು ನಿರಾತಂಕವಾಗಿ ಬೆಳೆಯ ಗೊಡಲಿಲ್ಲ. ಆದ್ದರಿಂದಲೇ ನನ್ನ ಮೊದಲನೆಯ ಕವನವನ್ನು ರಚಿಸಿದ ಹದಿನೈದು ವರ್ಷಗಳ ತರುವಾಗ ಈ ಕವನ ಸಂಗ್ರಹ ಪ್ರಕಟವಾಗುತ್ತಿರುವುದು! ಅದರಿಂದ ನನಗೆ ವಿಷಾದವೇನೂ ಆಗುತ್ತಿಲ್ಲ. 'ತಾಳಿದವ ಬಾಳಿದ' ಎಂಬ ಮಾತಿನ ಸತ್ಯಕ್ಕೆ ಇದೂ ಒಂದು ನಿದರ್ಶನವಾಯಿತು.

ಆದರೂ ನನ್ನಲ್ಲಿ ಬೀಜರೂಪವಾಗಿದ್ದ ಕಾವ್ಯಶಕ್ತಿಯನ್ನು ಮೊದಲು ಗುರುತಿಸಿ ಪ್ರೋತ್ಸಾಹಿಸಿದವರು, ಲಿಂಗೈಕ್ಯರಾದ ಹರ್ಡೇಕರ ಮಂಜಪ್ಪನವರು ನಾನು ಬರೆದ ಮೊದಲನೆಯ ಕವನವನ್ನೇ ಅವರು ಪ್ರಕಟಿಸಿ ನನಗೊಂದು ನಂಬುಗೆ ಹುಟ್ಟಿಸಿದರು. ಈ ಸಂದರ್ಭದಲ್ಲಿ ನಾನು ಅವರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನನ್ನ ಕಾವ್ಯಶಕ್ತಿ, ನಾನು ಕಾಲೇಜಿಗೆ ಹೊದ ಮೇಲೆ ಯಾವುದೋ ಒಂದು ಘಟನೆಯಿಂದ ಕುಂಠಿತವಾಗಿ ಹೋಯಿತು. ಖಂಡಿತವಾಗಿಯೂ ಕವಿತೆ ಬರೆಯಕೂಡದೆಂದು ಶಪಥ ತೊಟ್ಟು ಕುಳಿತಿದ್ದ ನನ್ನನ್ನು ಮತ್ತೆ ಕಾವ್ಯರಂಗಕ್ಕೆ ಎಳೆದು ತಂದುದು ಶ್ರೀ ಜಿ. ಪಿ. ರಾಜರತ್ನಂ ಅವರ "ಹತ್ತು ವರುಷ" ಎಂಬ ಪುಸ್ತಕ. ಅದನ್ನು ನಾನು ಓದದೆ ಇದ್ದಿದ್ದರೆ, ಮತ್ತೆ ಕವಿತೆ ಬರೆಯುತ್ತಿದ್ದೆನೋ ಇಲ್ಲವೋ! 'ಹತ್ತು ವರ್ಷ' ನನ್ನಲ್ಲಿ ಆತ್ಮ ವಿಶ್ವಾಸವನ್ನು ಹುಟ್ಟಿಸಿ, ಮತ್ತೆ ಬರೆಯುವಂತೆ ಪ್ರೋತ್ಸಾಹಿಸಿತು. 'ಹತ್ತುವರ್ಷ'ದಿಂದ ನಾನು ಪಡೆದ ಋಣ ಅಷ್ಟು ದೊಡ್ಡದು! ಅದಕ್ಕಾಗಿ ಶ್ರೀ ಜಿ. ಪಿ. ರಾಜರತ್ನಂ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಅದೇ ಕಾಲಾವಧಿಯಲ್ಲೇ ನನಗೆ ಶ್ರೀ ಕುವೆಂಪು ಅವರ ಶ್ರೀ ವಿವೇಕಾನಂದ ಗ್ರಂಥದ ಪರಿಚಯವೂ ಆಯಿತು. ಆ ಪುಸ್ತಕ ನೋಡಿದ ಮೇಲೆ ನನ್ನಲ್ಲಿದ್ದ ಕಾವ್ಯ ಶಕ್ತಿ ನನ್ನ ನಿರೀಕ್ಷೆಯನ್ನು ಮೀರಿ ಬೆಳೆಯಿತು. ಜೊತೆಗೆ ಶ್ರೀ ಕುವೆಂಪು ಅವರ ಕಾವ್ಯಗಳಿಂದ ಪಡೆದ ಸ್ಫೂರ್ತಿ ಎಷ್ಟೆಂದು ಹೇಳಲಿ? ಅವರ ವರ್ಚಸ್ಸು ನನ್ನ ಬಾಳಿನ ಮೇಲೆ ಆಗಿರುವಂತೆ ನನ್ನ ಕಾವ್ಯದ ಮೇಲೂ ಆಗಿದೆ. ಇಂದು ಈ ದಿಶೆಯಲ್ಲಿ ನಾನೇನಾಗಿರುವೆನೋ ಅವೆಲ್ಲವೂ ಕವಿಕುವೆಂಪು ಅವರ ಕಾವ್ಯದ ಕೃಪೆ! ಕುವೆಂಪು ಕಾವ್ಯದ ರಕ್ತ ನನ್ನ ರಕ್ತದಲ್ಲಿ ಒಂದುಗೂಡಿದೆ, ನನ್ನ ಸಂಸ್ಕಾರದ ಶಕ್ತಿಗೆಸಾಧ್ಯವಾದಷ್ಟು.- ತಾಯಿಯ ರಕ್ತ ಶಿಶುವಿಗೆ ಬರುವಂತೆ! ತಾಯಿಗೆ ತಾನೆಷ್ಟು ಋಣಿ ಎಂಬುದನ್ನು ಯಾವ ಮಗು ಹೇಳ ಬಲ್ಲುದು?

ಶ್ರೀ ಹರ್ಡೇಕರ ಮಂಜಪ್ಪನವರಿಂದ ದೊರೆತ ಪ್ರೋತ್ಸಾಹದಿಂದ ಮೊದಲ್ಗೊಂಡು ಕರ್ನಾಟಕದ ವಿವಿಧ ವಾರ, ಮಾಸಿಕ, ಪಕ್ಷ ಪತ್ರಿಕೆಗಳು ಆಗಾಗ ನನಗೆ ನೆರವು ಕೊಟ್ಟವು. ಅವುಗಳಲ್ಲಿ 'ಕರ್ಮವೀರ' 'ಜಯಂತಿ' 'ವಾಣಿ' 'ಪ್ರಗತಿ' ಮುಂತಾದ ಪತ್ರಿಕೆಗಳೂ "ರಸಋಷಿ" ಎಂಬ ಕವನ ಸಂಗ್ರಹವೂ, ಕೊಟ್ಟ ಸ್ವಾಗತ ತುಂಬ ದೊಡ್ಡದು. ಅದರಲ್ಲೂ 'ಕರ್ಮವೀರ' ಮತ್ತು "ಉಷಾ" ಪತ್ರಿಕೆಗಳು ಎರಡು ಮೂರು ವರ್ಷ ಗೌರವ ಸಂಭಾವನೆ(Honourarium) ಕೊಟ್ಟು ಆರ್ಥಿಕವಾಗಿಯೂ ಸಹಾಯ ನೀಡಿದವು. 'ಕರ್ಮವೀರ' ಮತ್ತು "ಉಷಾ" ಪತ್ರಿಗಳ ಈ ಪ್ರೋತ್ಸಾಹ ನನ್ನ ಕಾವ್ಯದ ಬೆಳವಣಿಗೆಗೆ ಬಹು ಮಟ್ಟಿಗೆ ಸಹಾಯಕವಾಯಿತು. ಈ ಪತ್ರಿಕೆಗಳು ಒಂದರ್ಥದಲ್ಲಿ ನನ್ನ ಸಾಕು ತಾಯಿ ಇದ್ದಂತೆ! ಅದಕ್ಕಾಗಿ ಆ ಪತ್ರಿಕೆಗಳಿಗೂ ಲೋಕ ಶಿಕ್ಷಣ ಟ್ರಸ್ಟಿಗೂ ನಾನು ಅನಂತ ಕೃತಜ್ಞ.

ಹಾಗೆಯೇ ದಾವಣಗೆರೆಯ ಸಾಹಿತ್ಯ ಸೇವಾ ಸಮಿತಿಯವರನ್ನು ಇಲ್ಲಿ ಪ್ರತ್ಯೇಕವಾಗಿ ಸ್ಮರಿಸಬೇಕಾಗಿದೆ. ಅವರು ಏರ್ಪಡಿಸಿದ್ದ ಕವನ ಸ್ಪರ್ಧೆಯಲ್ಲಿ ನನ್ನ ಕವನ 'ಲೀಡನ್ ಮುತ್ತಿಗೆ' ಎಂಬುದಕ್ಕೆ ಬಹುಮಾನ ಕೊಟ್ಟು ನನ್ನ ಕಾವ್ಯ ಶಕ್ತಿಯ ಬಗ್ಗೆ ಆತ್ಮ ವಿಶ್ವಾಸವನ್ನು ದೃಢಪಡಿಸಿದರು.

ಈ ಮುಂದಿನ ಪುಟಗಳಲ್ಲಿರುವ ಕವಿತೆಗಳ ಬಗ್ಗೆ ನಾನು ಏನನ್ನೂ ಹೇಳ ಬಯಸುವುದಿಲ್ಲ. ಸಹೃದಯರು ಅವುಗಳ ಆಳ, ಎತ್ತರವನ್ನು ಅವರವರ ಸಂಸ್ಕಾರಕ್ಕೆ ತಗುವ ರೀತಿಯಲ್ಲಿ ಸ್ವಾಗತಿಸುವರು, ಇಲ್ಲವೆ ತಿರಸ್ಕರಿಸುವರು.

'ದಿವ್ಯ ನಿರ್ಲಕ್ಷತೆಯೆ ವರಕವಿಯ ಪಂಥ' ಎಂಬುದನ್ನು ಕೊಂಚ ಮಟ್ಟಿಗಾದ ರೂ ಮೈಗೂಡಿಸಿಕೊಂಡಿರುವ ನಾನು ಈ ಕೃತಿಯನ್ನು ಯಾವ ದೃಷ್ಟಿಯಿಂದ ನೋಡುತ್ತಿದ್ದೇನೆಂಬುದನ್ನು; 'ಅವನ ಪದದಡಿಯಲ್ಲಿ' ಎಂಬ ಅಷ್ಟಪಟ್ಪದಿಯ ಲ್ಲೇ ಸ್ಪಷ್ಟವಾಗಿ ನಿರೂಪಿಸಿದ್ದೇನೆ.

"ದೇವನೆಲ್ಲಿ" ಎಂಬ ಕವನ ಠಾಕೂರರ ಕವಿತೆಯ ಅನುವಾದ. ಈ ಕವನ ಸಂಗ್ರಹಕ್ಕೆ ಹಿತವಚನವನ್ನು ಬರೆದು ಕೊಟ್ಟ ಗೆಳೆಯರಾದ ಜವರೇಗೌಡರು ನನ್ನನ್ನು ತೀರಿಸಲಾರದ ಋಣಕ್ಕೆ ಗುರಿಮಾಡಿದ್ದಾರೆ. ಯಾವ ಮಾತುಗಳಿಂದ ನನ್ನ ಕೃತಜ್ಞತೆಗಳನ್ನು ಅರ್ಪಿಸಲಿ?

ಇದರಲ್ಲಿ ಕೆಲವು ವ್ಯಾಕರಣ ಛಂದಸ್ಸಲಂಕಾರ ದೋಷಗಳೂ, ಅಚ್ಚಿನ ದೋಷಗಳೂ ನುಸುಳಿಕೊಂಡಿವೆ. ಕೆಲವು ನನ್ನ ಅರಿವಿನ ಅಭಾವದಿಂದಲೂ ಇನ್ನುಳಿದವು ಕಣ್ಣು ತಪ್ಪಿಯೂ ಆಗಿವೆ. ಅವುಗಳನ್ನು ಸಹೃದಯರಾದ ಹಿರಿಯರಿಗೆ ತೋರಿಸಿ ತಿದ್ದಿಸಬಹುದಾಗಿತ್ತು. ಆದರೆ ಆ ಧೈರ್ಯ ನನಗೆ ಬರಲಿಲ್ಲ. ಅಚ್ಚಾದ ಮೇಲೆ ಅವುಗಳನ್ನು ಆದರದಿಂದ ಶ್ರೀ ಕುವೆಂಪು ಅವರು ಎತ್ತಿ ತೋರಿಸಿದರು. ಈ ಮುದ್ರಣ ಆಗಲೇ ಆದುದರಿಂದ ಮುಂದಿನ ಮುದ್ರಣದಲ್ಲಿ- ಅದು ಎಂದಾದರೂ ಈ ಜನ್ಮದಲ್ಲಿಯೇ ಆದರೆ-ಸರಿಪಡಿಸಲಾಗುವುದು. ಸಹೃದಯರು ಅಚ್ಚಿನ ದೋಷಗಳನ್ನು ತಿದ್ದಿಕೊಂಡು, ವ್ಯಾಕರಣ ದೋಷಗಳನ್ನು ಕ್ಷಮಿಸಿಯೂ ಓದಬೇಕೆಂದು ವಿನಂತಿ.

ಅಚ್ಚಿಗಾಗಿ ಹಸ್ತ ಪ್ರತಿ ತಯಾರಿಸಿದ ಚಿ. ಶರಣನಿಗೂ, ಕರಡನ್ನು ತಿದ್ದಿ ಸಹಾಯ ಮಾಡಿದ ಗೆ. ವೃಷಭೇಂದ್ರಸ್ವಾಮಿ ಅವರಿಗೆ ನನ್ನ ನೆನಕೆಗಳು. ಮುಖ ಪುಟದ ಚಿತ್ರವನ್ನು ಶೀಘ್ರವಾಗಿಯೂ, ಅದಂವಾಗಿಯೂ, ಕಲಾತ್ಮಕವಾಗಿಯೂ ಕೇಳಿದ ಕೂಡಲೇ ರಚಿಸಿಕೊಟ್ಟ ಆಪ್ತ ಮಿತ್ರ ಶ್ರೀ ಪಿ. ಆರ್. ತಿಪ್ಪೇಸ್ವಾಮಿ ಅವರಿಗೂ ನಾನು ಅನಂತ ಕೃತಜ್ಞ.

ಇಂತು

೧-೧೦-೫೩
ಬಳ್ಳಾರಿ

**ಕೋ. ಚೆನ್ನಬಸಪ್ಪ**

# ಪರಿವಿಡಿ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೨ | ನಿಮಿಸುತೊಮ್ಮೆ | ನಮಿಸುತೊಮ್ಮೆ |
| ೪ | ೧೫ | ಕಾಂತ್ರಿಕಾರರ್ | ಕ್ರಾಂತಿಕಾರರ್ |
| ೪ | ೨೧ | ಕ್ರೀಮಿಕೀಟ | ಕ್ರಿಮಿಕೀಟ |
| ೬ | ೫ | ಕೈಸಾರ್ದುವನ್ನೆಗಂ | ಕೈಸಾರುವನ್ನೆಗಂ |
| ೬ | ೭ | ಸಂದ್ಯರಾಗ | ಸಂಧ್ಯಾರಾಗ |
| ೧೨ | ೪ | ಹೊರಕು | ಹೊರತು |
| ೨೦ | ೭ | ಉದ್ಧಾರು | ಉದ್ಧಾರ |
| ೨೩ | ೯ | ನೀರೆಜದಲಿ | ನೀರೇಜದಲಿ |
| ೨೯ | ೬ | ಅಬ್ಬವೊ | ಅಬ್ಬರವೊ |
| ೩೧ | ೧೧ | ಸ್ವರಸ್ವ | ಸರ್ವಸ್ವ |
| ೩೧ | ೧೨ | ಕೆರೆದುಕೊ | ಕರೆದುಕೊ |
| ೩೬ | ೧೬ | ನೆಗೆಯುರಾ | ನೆಗೆಯುವಿರಾ |
| ೪೦ | ೧ | ಏಳಸದಿರು | ಎಳಸದಿರು |
| ೪೦ | ೪ | ಚವುಟಿ | ಚಿವುಟಿ |
| ೪೧ | ೯ | ಗುರುಡ | ಗರುಡ |
| ೪೨ | ಶೀರ್ಷಿಕೆ | ನಿನಾರ್ಗೆ | ನೀನಾರ್ಗೆ |
| ೪೬ | ೯ | ಅದೊಡಂ | ಆದೊಡಂ |
| ೪೯ | ೧೦ | ನಿನ್ನನೆಮ್ಮಡೆ | ನಿನ್ನನೆಮ್ಮೆಡೆ |
| ೫೬ | ೧ | ನಿನಾಡವೀ | ನೀನಾಡುವೀ |

# ನಮಿಸುತೊಮ್ಮೆ

ನಮಿಸುತೊಮ್ಮೆ ನಮಿಸುತೊಮ್ಮೆ

ನಮಿಸುತೊಮ್ಮೆ ನಿನಗೆ ಪ್ರಭೂ!

ಹಗಲು ಇರುಳು ಮನೆಯನೆನೆದು

ಹಾರುವಂಚೆ ಹಿಂಡಿನಂತೆ

ಪ್ರಾಣಪಕ್ಷಿ ರೆಂಕೆಗೆದರಿ

ಆಪಾರದೆಡೆಗೆ ಹಾರಲಿ

ನಿನ್ನ ಸೇರಲಿ!

ಮೂಲ: ಠಾಕೂರ್ ಅನು: ಕುವೆಂಪು.

# ಅವನ ಪದದಡಿಯಲ್ಲಿ

ನನ್ನ ಸೃಷ್ಟಿಸಿದವನ ಕರ್ತೃತ್ವ ಶಕ್ತಿ ತಾಂ
  ಹಿಡಿದ ಲೇಖನಿಯಿಂದ ಮಸಿಯಂತೆ ಇಳಿದು ಬರೆ
  ಬರೆದೆನಲ್ಲದೆ ಕರ್ತೃ ನಾನೆಂತಹೆನು ? ತೋರಿ
ಭ್ರಮೆಯ ; ನನ್ನವಿವು ಕವಿತೆ ಎಂದೆಂಬ ಗರ್ವ ತಾಂ
ಸುಳಿದೊಡನೆ ಸುಡಲಿ ಮೃಡನ ಕಿಡಿಗಣ್ಣಿನಗ್ನಿಯೆ !
  ಕೆಂಪು ತೋಟದೊಳರಳಿ ಮೂಡಿದೊಲು ದಿವಜಾತ
  ಸ್ವರ್ಗವೇ ಭುವಿಗಿಳಿದು ಬಂದಂತೆ ಕಂಗೊಳಿಪ
ಪುಷ್ಪಲತೆಗಳಿಗೆಲ್ಲ ತೋಟಗಾರನೆ ಕವಿಯೇ ?
ಹಿಂದೆ ನಿಂತಿಹ ತಾಯಿ ಕಾವೇರಿ ನದಿಯ ನೀರ್
  ಮುಂದೆ ತೋರುವ ಪ್ರತಿಮೆ ಕಾವೇರಿ ಕೈಯಿಂದ
  ತೀರ್ಥದೊಲು ಬೀಳ್ವಂತೆ, ನನ್ನ ಈ ಕೈಯಿಂದ
ಅವನೆ ಬರೆಸಿದನಲ್ತೆ ? ನಾನ್ ಬರೆದುದೇನು ತೋರ್ ?
  ಈ ನಾಮ ರೂಪುಗಳ್ ಈ ಕೃತಿಯ ಕವಿಯಲ್ಲ
  ಅವನ ಪದದಡಿಯಲ್ಲೆ ಕೀರ್ತಿನಿಂದೆಗಳೆಲ್ಲ.

# ಪ್ರಾಣಪಕ್ಷಿ

## ಕಡೆಗಾಣಲೀ ಜೀವ ದೀನರಿಗೆ ಮುಡಿಪಾಗಿ

"ಎನಿತು ಸಿರಿ ಸಾರ್ವಡಂ ಮಾಣ್ಬೊಡಂ, ನಿತ್ಯತ್ವ
ಮನುವಪ್ಪತಂ ಸಾವಡಂ ಮತ್ತೆ ಹಂಪೆಯರ
ಸನ ಪೊಗಳ್ವ ನಾಲಗೆಯೊಳನ್ಯ ದೈವವ"ನೆನೆ
ಯೆನೆಂಮುನ್ನತ ಮಹಾ ಪ್ರತಿಜ್ಞೆಯಂ ಗೈಯ್ದ
ಉಭಯಕವಿ ಕಮಲರವಿ ರಾಘವಾಂಕನ ಗುರುವೆ
ಓ ಚತುರ ಕವಿರಾಯ ಹಂಪೆಯ ಹರೀಶ್ವರನೆ !
ಪ್ರೇಮ ಸ್ವರೂಪಿ ತಾಂ ಪ್ರೇಮದಿಂ ಕವಿಪರಮ-
ಹಂಸಗೆ ತನ್ಮಾತ್ರ ಸಂಸ್ಕಾರಮಂ ಪಡೆದು
ಇತರರಂ ಸಂಸ್ಕರಿಸಲೆಂದಿತ್ತ ವರಕಾವ್ಯ
ಶಕ್ತಿಯಂ "ಕನಿಷ್ಟರ ಮೇಲೆ, ಸಾವರ ಮೇಲೆ
ಉಬ್ಬುಬ್ಬಿ ಕಬ್ಬಮಂ ಕಟ್ಟಿ ಕೀಳ್‌ಗೆಲಸಕೆ
ಳಸದಿರಿ; ದೇವದೇವೋತ್ತಮನ ಚರಣಕಮಲವ
ಸ್ತುತಿಸಿ ಉದ್ಧಾರವಾಗೆಂದು ಬೋಧಿಸಿದ ತಂದೆ!
ಕಣ್ಣಪ್ಪ, ಮಾದಾರ ಚೆನ್ನಯ್ಯ, ಮಲುಹಣರ
ಮೇಲೆ ಕಬ್ಬಂಗಳಂ ಕಟ್ಟಿ ವಾಕ್ ಶಕ್ತಿಯಂ
ಸಾರ್ಥಕ್ಯ ಗೊಳಿಸಿದಾ ಕವಿರಾಜ ! ಹರಿಹರದೇವ
ಸ್ವೀಕರಿಸು ಅಂಜಲಿಯ ಕಡುಬಡವನೊಲಿದಿತ್ತ
ಅಂಬಲಿಯ ಭಕ್ತಿಪ್ರಿಯಂ, ದೇವನುತ್ಸಾಹದಿಂ
ಭುಜಿಸುವೋಲ್ !

ಓ ನಿನ್ನ ದಯೆಯಿಂ ಮುನ್ನ
ಕನ್ನಡದ ವಾಗ್ದೇವಿ ಯಾರಾಧನೆಯನಸದೃಶ
ಪಾಂಗಿನಿಂ ಗೈಯ್ದ ಕವಿ ಚಕ್ರವರ್ತಿತ್ರಯರ್
ಎಲ್ಲರುಂ [ಭಕ್ತಿಯಿಂ ಮಣಿಪೆನವರ್ಗೆಲ್ಲ]
ವಾಕ್ಶಕ್ತಿ, ಸಕಲ ಕಲಿ ಪರತತ್ವ ಪೂಜೆಗೆಂ-
ದರಿತೊಡಂ ವಿಕ್ರಮಾರ್ಜುನ ಚಲುಕ್ಯ ಕಂಠೀ
ರವಂ ಮೊದಲಾದ ರಾಜರಂ ಪೊಗಳದಿರಲಿಲ್ಲ!
ಹರಿಹರಾಚಾರ್ಯ ನೀಂ ಸಂಪ್ರದಾಯದ ಸವಿವ
ನೆಳಿಸೊಯ್ದು ಮಸಣದಲಿ ನಿಸ್ಕರ ಣವಿಂ ಉರೆ ಹಿ
ಕಾವ್ಯ ಮಾರ್ಗದೊಳಿದ್ದ ಕೃತಕ ಗಿರಿಗಡಣಮಂ
ವಜ್ರಹತಿಯಿಂ ಸೀಳ್ದು; ಸಾಮಾನ್ಯರರಿಯುವೊಲು
ಸಾಮಾನ್ಯವಲ್ಲದಿಹ ಮಹತ್ ಕಾವ್ಯಂಗಳಂ ರಚಿಸಿ
ಸಾಹಿತ್ಯದಲ್ಲಿರ್ದ ಸಾಮ್ರಾಜ್ಯ ಶಾಹಿಯಂ
ಬುಡ ಸಹಿತ ಸುಟ್ಟುರುಹಿ, ಪುಸ್ತಪಾಂಡಿತ್ಯ ಪಂಡಿತರ
ನಿರ್ನಾಮಮಂ ಗೈಯ್ದ ಹೇ ಕ್ರಾಂತಿ ಕಾರರ್ ಒಡೆಯ
ಹರಿಹರ ಮಹಾಕವಿಯೆ ನಮೋ ನಿನಗೆ!

ಕೇಳಿಲ್ಲಿ!

ಹಿಂದೆ ನೀಂ ಕ್ರಾಂತಿಕಿಡಿ ಹೊತ್ತಿಸಿದ ಸವೆರ್ಣಯಾ
ನಾಡಿನಲಿ ಉದಯಿಸಿದ ಕಿರಿಯ ಕವಿನುಡಿಯುತಿಹ
ಪೆರ್ರಿಯಾನುಡಿಗಳಂ: ನೂರಾರು ವರುಷದಿಂ
ಉಳ್ಳವರ ತುಳಿತದಿಂ ಅನವರತ ಬಳಲುತಿಹ
ಕ್ರಿಮಿ ಕೀಟದಂತಿರುವ ಭಾರತೀಯರ ಬಾಳು
ಬಿಡುಗಡೆಯ ಪಡೆವನ್ನೆ ಎನ್ನ ಈ ಲೇಖನಿಯು
ಮೀಸಲಾಗಿಡುತಿಹೆನು ದೀನರಾರಾಧನೆಗೆ;
ಪಾಪಿಗಳ ಪೂಜೆಗಂ; ಬಡವನಾ ಸೇವೆಗಂ;
ದೀನರಲಿ ದೈವಮಂ ಪೂಜಿಸುವೆನಂತಲ್ಲ-

ದೆಂದಾದೊಡಂ ಮರೆತು ನೃಪರ ನೃಪ ಸೇವಕರ
ಧರ್ಮದಾ ಮುಸುಕಿನಲಿ ದೋಚುತಿಹ ಕಳ್ಳರಂ
ಕುರಿತು ಒಂದಕ್ಕರವ ನುಡಿದೆ ನಾದೊಡೆಬರಲಿ
ಎನ್ನ ಗುರು ಪರಮಹಂಸಗೆರಡು ಬಗೆದರೊದಗುವ
ನರಕ! ಎನ್ನದಿದು ಪರಮ ಉನ್ನತ ಪೂಣ್ಕೆ!
ನಿನ್ನ ಭಕ್ತಿಯುರಕ್ತ, ನಿನ್ನ ನಿಷ್ಠೆಯುನೆತ್ತರ್,
ನಿನ್ನ ಛಲದರುಣಜಲ, ನಿನ್ನ ನೇಮದ ಕೆನ್ನೀರ್
ಎನ್ನ ನಾಡಿಯು ತುಂಬಿ ಉದ್ಧಾರಗೈಯ್ ತಂದೆ!
ನಿನ್ನ ಕಾವ್ಯೋದ್ದೇಶ ಎನ್ನ ಬಾಳ್ ಉಸಿರಾಗಿ
ಕಡೆಗಾಣಲೀ ಜೀವ ದೀನರಿಂಗೆ ಮುಡಿಪಾಗಿ!!

# ಅವನ ಹಾಡನೆ ಹಾಡು

ಕಲ್ಪನೆಯ ವೈನತೇಯನ ಹತ್ತಿ ಸತ್ಯಸೌಂದ-
ರ್ಯಂಗಳೆಂಬೆರಡು ಕಂಗಳಿಂ ಕಾವ್ಯವನಿತೆಯ
ಕೆಲದಿ ಆನಂದಮಂ ಸವಿವ ಓಸೊಬಗಿನೊಡೆಯನೆ,
ಮುಂದ ವರಿ ಸಾಧನೆಯ ಮಾರ್ಗದಲಿ ಸಿದ್ಧಿ ತಾಂ
ಕೈಸಾರ್ದುವನ್ನೆಗಂ! ಆ ನಿನ್ನ ಉನ್ನತೋನ್ನತ
ತಾಣದಿಂ ಲೋಗರರಿಯದ ಕಣ್ಗೆ ಈ ನಿರ್ಜೀವ
ಇನನುದಯ, ಸಂಧ್ಯರಾಗ, ಪಾಂಥಿಯ ರುದ್ರನರ್ತನ
ಲೀಲೆ ಚಂದ್ರಮನ ಹಾಲ್ ಬೆಳಕು ನಿಂದುಸುರುವುವು
ನಿನಗೆ ಸಂದೇಶಮನ್ ಚಿರಮಧುರವಾಣಿಯಲಿ !!
ಚೆಲುವೆಯರ ಇಂಚರಂ, ಮುಂಗುರುಳು ನುಣ್ಗದಪು
ಕೆಂದುಟಿಯು ಬೊಗಸೆಗಣ್ ಮೇಣೆಲ್ಲ ಚೆಲುವುಗಳ್
ಆತನ ಸ್ವರೂಪ ಮೆಂದರಿದು ಭಯಭಕ್ತಿಯಿಂ
ಕಾಣ್ ಆಕೆಯಲಿ ಆತನ ಕಲಾವೈಭವದ ಕರ್ಮವನ್!
ನಿನ್ನೆದೆಯ ವೀಣೆಯಂ ನುಡಿಸಲೆಂದೆ ನಿತೊ ರತಿ
ಮೇನಕೆಯರೊಲಿದೆತ್ತಿ ಕೊಂಡೆಳೆಯ ಬಹುದವರ
ಕುಸುಮ ಕೋಮಲ ಲತೆಯ ಕುಡಿಯಂಥ ಬೆರಳ್ಗಳಿಂ!

ಆವನ ಹಾಡನೆ ಹಾಡಿ ಸಾರ್ಥಕಂ ಗೈಯವನಿತ್ತ
ವೀಣೆಯಂ! ಸತ್ಯ ಸೌಂದರ್ಯಗಳೊಂದೆಂಬ
ಸತ್ಯವನ್ ಹಾಡಿಕುಣಿ ಹುಚ್ಚೆದ್ದು ಮೈಮರೆವಂತೆ!!
ನನ್ನೆದೆಯ ಮಂದಿರದಿ ಬೆಳಗುತಿರಲನವರತ
ದಿವ್ಯ ಮಂಗಳಜ್ಯೋತಿ, ಮಿಡಿಯುತಿರಲವನನುಡಿ
ಕಾಮವಾಸನೆಯ ದುರ್ಗಂಧ ನುಸುಳದೊಲು ವಹಿಸು
ಜಾಗ್ರತೆಯ ಇಲ್ಲದಿರೆ ನಿನ್ನ ವೀಣೆಯ ತಂತಿ
ಚಟಚಟನೆ ಸಿಡಿದು ನಿರ್ನಾಮವಾಗುವುದು! ದಿವ್ಯ
ಕರವಾಳದಿಂ ತನ್ನ ಕೊರಳಂ ತಾನೆಕೊಯ್ದಂದದಲಿ

# ದೇವನೆಲ್ಲಿ?

ತ್ಯಜಿಸು ಭಜನೆಯನು ನಿಲಿಸು ಕೀರ್ತನೆಯ ಬಿಸುಡುಮಾಲೆ ಜಪದ
ಪೂಜೆಗೈವೆ ನೀನಾರನಲ್ಲಿ ಕದ ಬಡಿದ ಗುಡಿಯು ಕವಿದ
ಕೊರೆವ ಕತ್ತಲೆಯ ಮೂಲೆಯೊಳಗೆ ಜನರಹಿತ ಸ್ಥಾನದಲ್ಲಿ?
ತೆರೆದು ನೋಡು ಕಂಗಳನು ಕಾಣ್ಬುದಾ ನಿನ್ನ ದೇವನಿಲ್ಲಾ!

ಎಲ್ಲಿರೈತ ತಾ ಬಿರುಸು ಭೂಮಿಯನು ಗೈಯುತಿರುವನಲ್ಲಿ,
ಎಲ್ಲಿ ರಸ್ತೆಯನು ಮಾಳ್ಪಕೂಲಿತಾಕಲ್ಲ ನೊಡೆವನಲ್ಲಿ,
ಅಲ್ಲಿ ಇಹನು ಅವರೊಡನೆ ಬಿಸಿಲು ಮಳೆಗಾಳಿ ಬೆಂಕಿಯಲ್ಲಿ
ಅಲ್ಲಿ ಧೂಳಿಯಿಂದೆಲ್ಲ ಮುಚ್ಚಿದಾ ತನ್ನ ವಸನದಲ್ಲಿ!

ನಿನ್ನ ಪಾವನಾಂಬರವ ಬಿಸುಟಿ ಹುಡಿಧರೆಗೆ ಬಾರ ಇಲ್ಲಿ
ಬಿಡುಗಡೆಯು ಬೇಕೆ? ಎಲ್ಲಿಹುದು ಬಿಡುವು ನಮ್ಮೊಡೆಯನಾತಸ್ವಾಮಿ
ಬಿಡದೆ ಕೊಂಡಿಹನು ಸೃಷ್ಟಿ ಬಂಧನವ ತಾನೇರಮಿಸಿ ಇದನು
ಎಡೆಬಿಡದೆ ಬದ್ಧ ನಮ್ಮೆಲ್ಲರೊಡನೆ ಎಂದೆಂದಿಗೂನು ತಾನು,

ಧ್ಯಾನದಿಂದ ಹೊರಬಾರ ನೀನು, ಸುಮ-ದೂಪ ದೀಪಬಿಸುಡಿ
ಏನು ಭಾಥೆ ನಿನ್ನುಡುಗೆ ಹರಿದು ತಾಮಾಸಿ ಹೋದರೂನೂ
ಕಾಣುನಿಲ್ಲು ನೀನವನ ಪಕ್ಕದೊಳು ಕೆಲಸದಲ್ಲಿ ಮತ್ತೆ
ಹಣೆಯ ನೀರು ನೀಸುರಿಸುವಾಗ ನಿಲ್ಲವನ ಪಕ್ಕದಲ್ಲೇ!

# ಬಾ ಬಾರೋ ನನ್ನೊಡೆಯ

ಬಾ ಬಾರೋ ನನ್ನೊಡೆಯ
ತಾ ತಾರೋ ಶಾಂತಿಯ
ಒಗೆ ಕದಡಿ ಕಂಗೆಟ್ಟ ಜೀವಿಗೆ
ಕತ್ತಲೆಯ ಕೋಣೆಗೆ
ಕಿಟಕಿಯ ತೆಗೆದಾಗ
ಬೆಳಕು ನುಗ್ಗುವಂತೆ ನುಗ್ಗಿ ಬಾ
ಅಮವಾಸ್ಯೆ ನಿಶೆಯನ್ನು
ದಿಕ್ಕುಗಳಿಗೋಡಿಸುತ
ಬರುವ ಭಾಸ್ಕರಂತೆ ಎದ್ದು ಬಾ
ಬಾ ಬಾರೋ ||೧||

ಮೋಡಗಳು ಮುಸುಕಿರುವ
ಆಗಸಕೆ ರವಿತಾನು
ಏರುತ ಬರುವಂತೆ ಏರಿ ಬಾ
ಪೂರ್ಣಿಮೆಯ ಮರುದಿವಸ
ಜಗದಿ ಮುಸುಕಿದ ನಿಶೆಯ
ಈಡಾಡಿ ಬರುವಂತೆ ಇಂದು ತಾ
ಬಾ ಬಾರೋ....||೨||

ಪೂಜೆಯ ಹಬ್ಬದೊಳು
ಬಾಲಕನ ಮುದ್ದುಗಳು
ಬಣ್ಣ ಬಣ್ಣವ ತಳೆದು ರಂಜಿಪೋಲ್
ಕಾಯ್ದು ಬಾಯಾರಿರುವ
ಬೇಯ್ದು ಸುಡುಸುಡುತಿರುವ
ಇಳೆಗೆ ಮಳೆ ಸುರಿವಂತೆ ನೀನು ಬಾ
ಬಾ ಬಾರೋ....||೩||

ರುಜೆಯುಡಸಿ ನರಳುವ
ರೋಗಿಗೆ ಚಿರಶಾಂತಿ
ಕೊಡುವ ಸಾವೆಂಬಂತೆ ನೀನುಬಾ
ಹಗಲಿರುಳು ದುಡಿದುಡಿದು
ಬಗೆ ಕದಡಿ ಕಂಗೆಟ್ಟ
ಹೀನನಿಗೆ ಬರುವಂತೆ ನಿದ್ದೆ ತಾ
ಬಾ ಬಾರೋ....||೪||

ಹಾಗೆ ಹೀಗೇ ಇಂತು
ಹೇಗೆ ಬರಬೇಕೆಂದು
ನಾ ಹೇಳೆ ನನಗಿಲ್ಲ ಮಾತುಗಳ್
ಎಂತೇನು ನೀ ಬಹುದು
ಭಕ್ತನಂ ಗುರುದೇವ
ಹುಡುಹುಡುಕಿ ಬರುವಂತೆ ನೀನು ಬಾ.
ಬಾ ಬಾರೋ....||೫||

# ಏನೆಂದು ಪ್ರಾರ್ಥಿಸಲಿ !

ಯಾವಾಗ ಪ್ರಾರ್ಥಿಸಲಿ, ಏನೆಂದು ಪ್ರಾರ್ಥಿಸಲಿ
ನಿನ್ನ ನೆನೆಯಲು ಬೇಕೆ ಕಾಲನಿಯಮ !
ಉದಯ ಸಂಧ್ಯಾರಾಗ ತಾರೆಗಳ ಮಿನುಗಿನಲಿ
ನಿನ್ನ ಮಹಿಮೆಯ ನಾನು ಕಾಣುತಿರಲು !

೨

ಹಕ್ಕಿಗಳು ಉಲಿವಾಗ, ಸಿಡಿಲೆರಗಿ ಬಡಿವಾಗ
ಬೇವು ಬಾಗೆಯ ಹೂವ ಗಂಧಸುಳಿದಾಗ ;
ತಂಗಾಳಿ ತೀಡಿ ಬರೆ, ತಣ್ಣೀರನೀಂಟುತಿರೆ
ಹೆಜ್ಜೆ ಹೆಜ್ಜೆಗು ನಿನ್ನ ನೆನಹೆ ತುಂಬುತಿರೆ

೩

ರೂಹಿಲ್ಲ ; ಜಗವೆಲ್ಲ ನಿನ್ನ ರೂಪವೆ ರೂಪ
ಯಾವ ರೂಪವ ನೆನೆದು ನಾ ತಣಿಯಲಿ !
ಹೆಸರಿಲ್ಲ; ಜಗಕೆಲ್ಲ ನಿನ್ನ ಹೆಸರೇ ಹೆಸರು
ಯಾವ ಹೆಸರನು ನುಡಿದು ನಾ ಮುಗಿಸಲಿ !

೪

ಆದ್ಯಂತ ರಹಿತನನು ಅನಾದಿ ಮಹಿಮನನು
ಕಾಲದವಧಿಯೊಳ್ ಕಟ್ಟಿನೆನೆಯುವೆಂತು !
ವಿಶ್ವಬ್ರಹ್ಮಾಂಡವನೆ ವ್ಯಾಪಿಸಿಹ ನಿನ್ನನ್ನು
ಮಾತಿನಲಿ ಕರೆಕರೆದು ಪ್ರಾರ್ಥಿಸುವೆನೆಂತು ?

೫

ದಿವ್ಯಾನುಭವ ತುಂಬಿದೆನ್ನೆದೆಯ ಭಾವಗಳ
ಹರುಕು ಭಾಷೆಯುಲುಲಿವ ಈ ಕವಿತೆಯಂತೆ
ಸತ್ಯದುರುವಿನ ಫಲದ ಭಾರದಲಿ ಜಗ್ಗುತಿರೆ
ನಾಮ ರೂಪವ ಸ್ಮರಿಸಿ ನಾ ತಣಿಯುವೆಂತು ?

# ಅರಸುವವರು

ಗೆಳೆಯ ಕೆಳದಿಯಾರು ಇಲ್ಲ
ಭಾಗ್ಯ ಭವನ ಎಮಗೆಯಿಲ್ಲ
ದಾರಿ ಕೊನೆಯೊಳ್ ದೇವನಗರಿ
ಇರುವುದೆಂಬ ನೆಚ್ಚು ಹೊರತು
ಏನು ಇಲ್ಲ
ನಮಗೆ ಯಾರೂಯಿಲ್ಲ

ತೃಪ್ತಿ ತುಷ್ಟಿ ಮನಶ್ಶಾಂತಿ
ಎನ್ನುವವುಗಳೆಮಗೆ-ಅಲ್ಲ
ಎಂದಿಗೂನೂ ದೊರಕದಿರುವ
ನಗರ ಅರಸಿ ಹೊರಟ ಎಮಗೆ
ಅವುಗಳಲ್ಲ
ಮನಶ್ಶಾಂತಿಯಿಲ್ಲ

ಎಂದಿಗೂನು ಕಾಣದಿರುವ
ಅಮಿತ ನಗರಿ ಅರಸಿಹೊರಟ
ನಮಗೆ-ನಮ್ಮ ಕುಲಕೆ
ಮರ್ತ್ಯದಲ್ಲಿ ಶಾಂತಿಯಿಲ್ಲ
ನಮಗೆಯಿಲ್ಲ-
ನಮ್ಮಕುಲಕೆ ಇಲ್ಲ.

ಮತ್ತೆ ಅದೇದಾರಿ ಮಾತ್ರ,
ಉಷಾ, ಸೂರ್ಯ, ಪವನ, ವರ್ಷ
ಮೇಲೆ ನೀಲ ಗಗನ ತಾರೆ,
ಕೆಳಗೆ ಉರಿವ ಅಗ್ನಿ ಮತ್ತೆ
ಅದೇ ದಾರಿ-
ನಮಗೆ ಅದೇದಾರಿ!

ದೇವ ನಗರಿ ಅರಸುತಿಹೆವು
ಚೆಲುವ ಬೀಡುಬೇಡುತಿಹೆವು
ಆದರೆಮಗೆ ದೊರೆಯುತಿಹುದು
ಗಡಿ ಬಿಡಿಯ ಸಂತೆ, ಮಸಣಗೋಳು
ದೊರೆವುದು
ನಮಗೆ ಸಿಗುವುದು.

ತೇಜೋವಂತ ಮನುಜರಲೆವ
ಸ್ವರ್ಣ ಶಹರವೆಂದಿಗಲ್ಲ
ದುಃಖಿ ಜನರ ಬೀದಿಯಲೆವ
ಆರ್ತ ನಗರದೊರೆವುದೆಮಗೆ
ದೊರೆವುದು
ನಮಗೆ ದೊರೆವುದು.

ಹಗಲು ಬೆಳಗು ಕ್ಷೀಣವಾಗಿ
ದೂರ
ಬೈಗು ಗೆಂಪಿನಲ್ಲಿ ಶಿಖರ
ಎದ್ದು ಕಾಣ್ಬ ವರೆಗೆ ಸಾಗಿ
ಹುಡಿಯ ದಾರಿ ನಡೆವೆವು
ನಡೆವೆವು.
ದಾರಿ ನಡೆವೆವು.

ಬೆಳಗಿನಿಂದ ಸಂಜೆವರೆಗೆ
ಹಗಲು ಕಳೆದು ಹೋಗುವನಕ
ಗಗನದಂಚಿ ನಾಚೆಯಲ್ಲಿ
ಪುಣ್ಯನಗರಿ ಅರಸಿಕೊಂಡು
ನಡೆವೆವು
ದಾರಿ ನಡೆದೆವು

ಗಳೆಯು ಕೆಳದಿ ಯಾರುಯಿಲ್ಲ
ಭಾಗ್ಯ ಭವನ ವೊಂದುವಿಲ್ಲ
ದಾರಿ ಕೊನೆಯೊಳ್ ದೇವನಗರಿ
ಇರುವುದೆಂಬ ನೆಚ್ಚು ಹೊರತು
ಏನು ಇಲ್ಲ
ನಮಗೆ ಯಾರೂ ಇಲ್ಲ.

ಜಾನ್ ಮ್ಯಾಸಿಫೀಲ್ಡ್ ಕವಿತೆ–"Seekers-"ನ ಅನುವಾದ.

# ದಾರಿ ನಡೆ

ರೈಲೋ, ಗಾಡಿಯೋ, ಕಾಲುನಡಗೆಯೋ
ಬಾಳಪಯಣಕೆ ಹೊರಟಿಹೆ
ಕಾಡೋ ನಾಡೋ ಏರಿ ಇಳುಕಲೋ
ದಾರಿನಡೆಯಲು ಬಂದಿಹೆ.
ಕಾಲ್ ನಡಗೆ ಬೇಸರ, ಬಸ್ಸು ಬಹುಶ್ರಮ
ರೈಲೆ ಬೇಡಿದರೆಲ್ಲಿದೆ ?
ದಾರಿ ಭೀಕರ ಬಹು ಅಪಾಯವು
ನಡೆಯುನೆಂದರೆ ಕೇಳ್ವುದೇ ?
ನಿನಗೆ ತಕ್ಕದು ; ಗುರಿಗೆ ಯೊಗ್ಯವು
ನಿನ್ನ ಸಾಧನ ನಿಂತಿದೆ.
ಬೇಕು-ಬೇಡದು ಎಂದು ಕೇಳಲು
ಆಯ್ಕೆ ಏನದು ನಿನ್ನದೇ ?
ಕಷ್ಟ ಸುಖವೋ ? ಸೋಲುಗೆಲ ವೋ ?
ಅದರ ಯೋಚನೆ ಯಾತಕೆ ?
ದಾರಿನಡೆ ನೀನದಕೆ ಬಂದಿಹೆ
ಅಳುತ ನಿಲ್ವುದೆ ಭಾರಕೆ ?

# ಸತ್ಯ ಅಗ್ನಿಯ ಕನ್ಯೆ

ಏಕಾಂತದಲ್ಲಿರಲು
ಹೃದಯಾಂತರಾಳದಲಿ
"ಸತ್ಯ ಬೇಕೇ ಸತ್ಯ
ಮಾಸಲಳಿಯದ ಸತ್ಯ"
ಎಂದು ಕನ್ಯೆಯ ವಾಣಿ
ಕರೆಯುತಿತ್ತು!
ಅವಳ ವೈಚಿತ್ರ್ಯ ಬಯಸಿ
ಬುದ್ಧಿ ಮನಗಳ ಸಲಿಸಿ
ತೋಳಸೆರೆ ಬಂಧನವು
ಬೇಕೆಂದು ಬಿಗಿಮನವು
ಜಾರುತಿತ್ತು!

೨

"ಕೆಂದುಟಿಯು ನನಗಿಲ್ಲ
ಮುಂಗುರುಳಿನವಳಲ್ಲ
ಸುಣ್ಣದಪು ಬಿಲ್ಲೆದೆಯು
ಮನಸೆಳೆಯುವಾಕೃತಿಯು
ನನ್ನದಲ್ಲ;
ಸತ್ಯಸಾಕರ್ಕಶಿಯು
ಕೊರಸಿಗಳ್ ಪಾಸುಗೆಯು
ನನಗಿಲ್ಲ ಹನಿಕರುಣ
ಕೊಡುವೆಯಾ ತನಹರಣ"
ಕೇಳ್ದಳೆನ್ನ!

೩

ಕೊರೆವ ಕತ್ತಲೆಯಲ್ಲಿ
ಹಣತೆ ಕಿರು ಬೆಳಕಿನಲಿ
ಹೊದೆದ ಮುಸುಕನು ಸರಿಸಿ
ಉಸಿರಾಡುವುದ ನಿಲಿಸಿ
ಕಂಡೆನವಳ!
ಗಡಗಡನೆ ನಡುಗಿದೆನು
ಮೈಬೆವರಿ ಹೆದರಿದೆನು ;
ಸತ್ಯ ಅಗ್ನಿಯ ಕನ್ಯೆ
ಜ್ವಾಲೆ ಉಡುಗೆಯ ಚೆನ್ನೆ
ವರಿಸೆನವಳ!

೪

ನೋಡಿದೊಡೆ ಎದೆನಡುಕು
ಅಪ್ಪಿದೊಡೆ ಭಸ್ಮವಹೆ!
ಹೋ ಸಾಕು ನಾನೊಲ್ಲೆ
ಎನ್ನ ಹೃದಯದ ಹುಲ್ಲೆ
ಹಾನಿಂತಿತು !
ಆದರೆದೆಯೊಳಗೊಂದು
ಕ್ಷೀಣವಾಣಿಯು ನಿಂದು
ಬಿಡಬೇಡ ಹೆದರದಿರು
ಕೈಕೊಟ್ಟು ವರಿಸಿಬಿಡು
ನೀನೆಂದಿತು.

೫

ತೂಗು ಉಯ್ಯಾಲೆಯಲಿ
ಡೋಲಾಯ ಮಾನದಲಿ
ಯೋಚಿಸಿದೆ ಅರೆಘಳಿಗೆ
ಆದರದೆ ಮರುಘಳಿಗೆ
ಬಂತು ವಾಣಿ !
‘ಸತ್ಯ ಬೇಕೇ ಸತ್ಯ
ಮೀಸಲಳಿಯದ ಸತ್ಯ’
ಬೇಕೆಂದು ನಿಶ್ಚಯಿಸಿ
ಕೈ ಚಾಚಿ ಹೇಳಿದೆನು
‘ನೀನೆನ್ನ ರಾಣಿ”

೬

“ಹಾನಿಲ್ಲು ದುಡುಕದಿರು
ಒಡನೆ ನಿಶ್ಚಯಿಸದಿರು
ನನ್ನ ಕೈಹಿಡಿಯುವೊಡೆ
ಮತ್ತೊಮ್ಮೆ ನೀನೋಡು
ಶಾಂತಿಯಲ್ಲಿ !
ನಾನು ದಾರಿದ್ರ್ಯವಧು
ನಿಷ್ಠುರಕೆ ತೌರು; ನಿಧಿ;
ಬಂಧುಗಳು ಹಗೆಯುಹರು
ಮಡದಿ ದೂರಾಗವಳು
ಇನ್ನು ಬೇಕೆ ?”

೭

ಹೃದಯ ಕ್ರಿಯೆ ನಿಂತಂತೆ
ಕೈಕಾಲು ಕಡಿದಂತೆ
ನಿಷ್ಪಂದ ವಾದುವೆವೆ
ಭೀಕರವ ನೆನೆಯುತಿದೆ
  ಸುಮ್ಮನಾಯ್ತು !

ಆದರೆದೆ ಯೊಳಗೊಂದು
ಕ್ಷೀಣವಾಣಿಯು ನಿಂದು
ಬಿಡಬೇಡ ಹೆದರದಿರು
ಕೈ ಕೊಟ್ಟು ವರಿಸಿಬಿಡು
  ನೀನೆಂದಿತು

೮

ಹೊದೆದ ಮುಸುಕನು ತೆರೆದು
ಅಗ್ನಿ ಕನ್ಯೆಯು ಇನಿತು
ಮುದವ ತಾಳ್ದವಳಂತೆ
ನಗೆಬೀರಿ ತೋಳೆತ್ತಿ
  ‘ಬಾ’ ಎಂದಳು

ಕೈಯೊಳಗೆ ಕೈಯಿಟ್ಟು
ಅವಳೆದೆಗೆ ಎದೆ ಇಟ್ಟೆ !
ಮರುಕ್ಷಣವೆ ‘ಧಗ್’ ಎಂದು
ಜ್ವಾಲೆಯಲಿ ನಾಬೆಂದು
  ಭಸ್ಮವಾದೆ
  ನಾಂ ಇಲ್ಲವಾದೆ !

# ಪಾಪಿ ಬಟ್ಟಲಿದು

ಓ ಗುರುವೆ ಪರಮಾತ್ಮ ಓ ದೇವ ದೇವ !
ದಿನದಿನವು ಕುದಿಯುತಿದೆ ಕೊರಗುತಿದೆ ಜೀವ ;
ಹೆಗಲ ಮೇಲಿನ ಶವವ ಮೆಲ್ಲಮೆಲ್ಲನೆ ಇಳಿಸಿ
ದಹಸಲಿಹ ಚಿತೆಯ ಮೇಲದ ಪವಡಿಸಿ ;

ಬೂದಿ ಮಾಡ-ವೊಲೆನ್ನ ಆತ್ಮ ದಹಿಸುತಲಿಹುದು
ಚಣಚಣಕೆ ತುಂಬುದಿದೆ ಪಾಪಿ ಬಟ್ಟಲಿದು
ಉದ್ಧಾರ ವೆಂಬುದದು ಉದ್ದಾಮ ಗುರಿಯಾಗಿ
ಬಿದ್ದಿಹೆನು ತಿಮಿರದಲಿ ಪಾಪಿನಾನಾಗಿ

ಇದ್ದು ಕಣ್ ತೆರೆದಿದ್ದು ಆತ್ಮಬೀಳ-ವುದಕಿಂ
ಇಲ್ಲದೊಲು ಅಳಿಸಿಬಿಡು ಈ ಬಾಳು ಸಾಕಿನ್ !
'ಎಂಥ ಹೇಡಿಯೋ' ಎಂದುನೀಂ ನಗುವೆ ಬಲ್ಲೆ,
ಅಹುದು ನಾಂ ಬಲ್ಲೆನದ-ಆದೊಡೇಂ ಕೊಳ್ಳ !

# ಆತ್ಮ ಹತ್ಯೆ

ಇಳಿಸು ನಿನ್ನೆದೆ ಭಾರ
ಮಣಿಸು ಮನ ದೇವನಿಗೆ
ಇಂತು ಅಂತೆಂದೇಕೆ ಚಿಂತಿಸುವೆ ಬರಿದೆ;
ಕುಳಿತು ನೀಂ ಚಿಂತಿಪೊಡೆ
ಅಳಿಸುವೆಯ ವಿಧಿ ಬರಹ
ಎಂದ ಮೇಲ್ ಚಿಂತಿಸುವುದಾತ್ಮ ಹತ್ಯೆ.

ನಿನ್ನೆ ತಾಳಿಯ ಕಟ್ಟಿ
ಚಿನ್ನೆ ಕೆನ್ನೆಯ ಮುಟ್ಟಿ
ಮುತ್ತ ನೊತ್ತುವ ಮೊದಲೆ ಇನಿಯ ಮಡಿಯೆ
ಎದೆ ಬಡಿದು ರೋದಿಸುವ
ಎಳೆ ಮಡದಿ ಕುದಿದಾಡೆ
ವಿಧಿಯ ತೇರಿನಗಾಲಿ ನಿಲ್ಲುವವೆ ಮರುಗಿ?

ಗರ ಬಡಿದರೇನಂತೆ
ಗಿರಿಯು ಬೆನ್ನಟ್ಟಿದೊಡೆ
ಅದಕೇನು ಕನಿಕರವೆ? ವಿಧಿ ಹಸಿದ ಮಾರಿ!
ಅಂದು ಆ ಲೆಕ್ಕಣಿಕೆ
ಬರೆದುದಕೆ ಹೊರತಿಲ್ಲ
ಇಂದದನು ಮಾರ್ಪಡಿಸೆ ಚಿಂತೆ ಮದ್ದಲ್ಲ!

ಆಗಬೇಕಾದುದದು
ಆಗಲೇ ಬೇಕು ಅದು!
ನಿನ್ನ ಇಚ್ಛೆಯು ತಾಳ ಲಯಕೆ ಅಲ್ಲ!
ಅದನರಿದು ಕರ್ಮಗೈ
ಬುವಿಯೊಳಗೆ ಬಂದುದಕೆ
ನಿನ್ನಿಚ್ಛೆ ಫಲದೊರೆಯಲೆಂಬಾಸೆ ಯಿಂದಲ್ಲ!

ಮರುಗದಿರು ಕೊರಗದಿರು
ಶೂರನೊಲು ನೆರವಾಗು
ಈಶ್ವರೇಚ್ಛೆಯು ಹಿರಿಯ ಯೋಗವಲ್ಲಿ
ಅದರಿಂದ ಸುಖವಹುದು
ಮುಕ್ತಿಯೂ ದೊರಕುವುದು
ಹೇಡಿಗಳ ಚಿಂತೆಯದು ನಿನಗೆ ತರವಲ್ಲ.

# ನಾನಿನ್ನ ಬಿಡೆನು

ದಾರಿದ್ರ್ಯ ತಪದುರಿಯ ಬೇಗೆಯಲಿ ಬೇಯುತಿಹವ
ಜಗವನೆಲ್ಲವನೋಲ್ಪ ಆಸರನು ಬಯಸಿ;
ಆದೊಡಾ ಜಗ ಕುರುಡು ಸಂತೈಸಲಿಪ ದೇವ
ಅಂತಾಯ್ತು ಹೇದೇವ ನಿನ್ನ ನೆರ ಬಯಸಿ!

ಎದ್ದು ಬಿದ್ದರು ನಿನ್ನ ನಾಮವನು ಜಗಿ ಬಿದ್ದೆ-
ಅಶನ ಐಸಿರಿ ಚಿನ್ನ ಕನ್ಯೆಯರಿಗಾಗಲ್ಲ
ಆತ್ಮ ನಿನ್ನೊಳು ನಿಂದು ಅವುಗಳಂ ಕಡೆಗೊದ್ದು
ಬಿಡುಗಡೆಯ. ಕಾಣಲಿಕೆ-ದಯೆ ಬಾರದಲ್ಲ!

ನಿಷ್ಠೆಯಲಿ ನಿನ್ನಡಿಯು ನಿರೇಜದಲಿ ನಿಲಿಸಿ
ಭಾವ ಶುದ್ಧಿಯು ಪಡೆಯೆ ನೀನೆ ಬಹೆಯಂತೆ!
ನಾವಾಸ ಬೇಕಿಲ್ಲ ವೆಂದೊರೆದು ಮೂದಲಿಸಿ
ನುಡಿದ ನುಡಿ ಬಡಿಯುವುದು ಸಿಡಿಲಿನಂತೆ!

ಮಾಯೆ ನಿರ್ಭರವಾಗಿ ಪಾಪರೂಪದಿ ಹರಿದು
ತುಂಬಿರುವ ಭಾರವಿಹ ಈ ಜಗವನೆಂತು
ಬಲಹೀನ ಈ ಎನ್ನ ಭಾವನುಲಿ ಹಿಡಿಯುವುದು
ಆದರಿಂದ 'ದಯೆ ಗೈಯ್ಯೊ' ಎಂದು ಬೇಡುವೆವು.

ಮಾಯೆಯನು ಹರಿದೊಗೆವ ಶಕ್ತಿ ನನ್ನೊಳಗಾಗೆ
ನಾನೊಬ್ಬ ದೇವನಹೆ ನಿನ್ನ ಹಂಗೇನು?
ಆ ಶಕ್ತಿಯಿಲ್ಲದುದಕಾಗಿ ನಿನ್ನಡಿಗೆರೆಗೆ
ಹೇಳುವುದೆ ಇಲ್ಲವೆಂದಿಲ್ಲ ದುದಕೆ!

'ಕರುಣಾಳುಬಾ' ಎಂದು ಹಗಲಿರುಳು ಕಿರಲುವೆನು
ಕರುಣೆಯಿಂ ನೋಡುತಿಹ ಕುರುಹಿಲ್ಲವಲ್ಲ!
ಆದೊಡಂ ಪಿಡಿದಿಹೆನು, ನಾನಿನ್ನ ಬಿಡೆನು!
ಬಿಟ್ಟು ಮಾಡುವುದೇನು? ಬೇರೆಗತಿಯಿಲ್ಲ.

# ಅಳಿಸಿ ಬಿಡು, ಕಳಿಸಿ ಬಿಡು

ಅಳಿಸಿಬಿಡು, ಕಳಿಸಿಬಿಡು
ನನ್ನ ಅಹಂ ದೀಪ!
ನನ್ನದೆಂಬುದೆಲ್ಲವನ್ನು
ಕೊಳ್ಳೊ, ವಿಶ್ವರೂಪ!

ಎನ್ನ ಸಿರಿ, ಎನ್ನ ಕೀರ್ತಿ
ಎಲ್ಲ ನಿನ್ನ ಮೈಮೆ
ಎಲ್ಲ ನಿನ್ನೊಳುದಿಸಿತಾಗಿ
ನನ್ನ ದಾವ ಗೆಲ್ಮೆ!

ನನ್ನ ಕವಿತೆ, ನನ್ನ ಕಲೆ
ಹೆಮ್ಮೆ ಪಡಲೆ ನಾನು?
ಕವಿಯು ಕವಿ ಕಲಾ ಮೂರ್ತಿ
ಅದ್ವಿತೀಯ ನೀನು!

ಜ್ಞಾನಿಯೆಂದು ಹೆಮ್ಮೆಪಡಲೆ
ಜ್ಞಾನ ನಿಧಿಯು ನೀನು
ಸುಂದರಾಂಗ ನೆನಲೆ ನಾನು
ಸೌಂದರ್ಯ ಮೂರ್ತಿ ನೀನು!

ನಾನು ಹಿರಿಯ ಅವನು ಕಿರಿಯ
ಎಂಬಗರ್ವ ಹುಟ್ಟಿ
ಬಲಿಯ ತಲೆಯ ಹತ್ತಿ ತುಳಿದ
ರೀತಿ ಹತ್ತಿ ಮೆಟ್ಟು!

ಎನ್ನ ಅಹಂಕಾರಲತೆಗೆ
ಎರೆಯ ಬೇಡ ನೀರ;
ನಿನ್ನ ಜ್ಯೋತಿ ಜ್ವಾಲೆ ನೆಕ್ಕಿ
ನುಂಗಿ ಬಿಡಲಿ ಪೂರ!

ಅಳಿಸಿಬಿಡು ಕಳಿಸಿಬಿಡು
ನನ್ನ ಅಹಂ ದೀಪ!
ನನ್ನದೆಂಬುದೆಲ್ಲವನ್ನು
ಕೊಳ್ಳೊ ವಿಶ್ವರೂಪ!

# ನಿನು ಹೇಳು ಜ್ಞಾನಧಾರೆ?

೧

ಎಲ್ಲಬಲ್ಲ ಜ್ಞಾನಿನೀನು
 ವೇದ ಬಾಯ್ಗೆ ಗೊತ್ತು
ಗೀತೆ ಭಾರತಂಗಳೆಲ್ಲ
 ನಿನ್ನ ಜಿಹ್ವೆ ಸೊತ್ತು!

೨

ಚಿಗಿತ ಮರದ ಕೊನೆಯೊಳಿದ್ದು
 ಶುಕಪಿಕಂಗಳೊರೆವುದೇನು?
ವೇದ ಬಲ್ಲ ಜಾಣ ನೀನು
 ಹೇಳಬಲ್ಲೆ ಯೇನು?

೩

ಜ್ಯೋತ್ಸ್ನ ಬ್ರಹ್ಮನಲೆಯ ಹರ್ಷ
 ಕಡಲಿನಲ್ಲಿ ನಿಂದು
ವನ್ಯರಾಜಿ ನುಡಿವ ಮೂಕ
 ವಾಣಿಗರ್ಥವೇನು?

೪

ಬಾನ ಬಳ್ಳಿ ಬಿಟ್ಟಕುಸುಮ
ಲಕ್ಷ ಲಕ್ಷ ತಾರೆ
ಕಣ್ಣ ಮಿಟುಕಿ ಸೂರೆವುದೇನು
ಹೇಳು ಜ್ಞಾನ ಧಾರೆ!

೫

ವೇದಗೀತೆ ಭಾರತಂ-
ಗಳೆಲ್ಲ ಬಲ್ಲ ಜ್ಞಾನಿ
ಪಕ್ಷಿ, ವೃಕ್ಷ, ತಾರೆ ನುಡಿದು
ದೇನು ಹೇಳು ಮತ್ತೆ!

೬

ಎಲ್ಲ ನಿನ್ನ ಜ್ಞಾನ ಶೂನ್ಯ
ಶೂನ್ಯವರಿಯದಿದ್ದರೆ!
ನೀರೊಳದ್ದುವವನ ಜೇಬಿ-
ನೊಳಗೆ ಯಿದ್ದ ಚಿನ್ನ.

# ಶ್ರುತಿ ಮಾಡು

ಒಂದಲ್ಲ; ಎರಡಲ್ಲ; ಮೂರಲ್ಲ ನೂರಲ್ಲ!
ಎದೆಯೆ ಕೇಳುವ ಗಾನಕೆಳೆಯು ಸಾಲುವುದಿಲ್ಲ!
ಲೆಕ್ಕವಿಲ್ಲವೆಯಿಲ್ಲ! ತಾಳ ತುಂತೂ ಇಲ್ಲ!
ಯಾವತಾನವೊ ಏನೋ ಕಿವಿಯೆ ಕೇಳುವುದಿಲ್ಲ!

ಆಲಿಸದೋ! ಕೇಳುತಿದೆ : ಕಿಡಿಯೊಡೆಯುವಂತೆ!
ಹೆಬ್ಬುಲಿಯು ಅಬ್ಬವೊ! ಕೊಬ್ಬಿದಾನೆಯ ಘೀಳೋ!
ಭೂತಗಳ ಪೋಷದುಲಿ ಗುಬ್ಬಿ ಹಾಕುವ ಸಿಳ್ಳೋ?
ಈ ಅಡವಿ ಮಧ್ಯದಲಿ ಕಿವುಡಾಗಿ ನಿಂತೆ!

ನುಗ್ಗಿ ಬಹ ನೂರ್ ದನಿಯ ಪರಿಪೆಗದ್ದಲದಲ್ಲಿ
ನಿನ್ನದಾವುದೊ ನನಗೆ ಗುರುತಾಗದಿಹುದು
ಬುದ್ಧಿ ತತ್ತರಿಸುತಿದೆ! ಚಿತ್ತವಲ್ಲಾಡುವುದು!
ಎತ್ತಣದೋ ಗತಿ ಯಿದಕೆ ಈ ತುಮುಲದಲ್ಲಿ!

ಎದೆಯ ತಂತ್ರಿಯನೆಳೆದು ಶ್ರುತಿಮಾಡು ದಿನ ದಿನಂ
ನೂರೆಂತು ನುಡಿಸಿದರು ಓಂಕಾರ ನುಡಿವಂತೆ!
ಕೋಟಿ ರಾಗಗಳುಗಮ ಓಂಕಾರವೆನುವಂತೆ!
ಐಕ್ಯವಾಗಲಿ ಕೊನೆಗೆ ಓಂಕಾರದಲಿ ಓಂ! ಓಂ! ಓಂ!

# ಇಂದು ಸುಡುಗಾಡಾಯ್ತು

ಇಂದು ಸುಡುಗಾಡಾಯ್ತು ಎನ್ನೆದೆಯ ವನವು
ನಿನ್ನಪೇಕ್ಷೆಯ ಕಿಚ್ಚು ಹುಚ್ಚೆದ್ದು ಸುಡಲು
ಹಿಂದೊಮ್ಮೆ ನಿನ್ನೊಲುಮೆ ಮಳೆ ಬಂದು ಬೆಳೆದ
ತರುಲತೆಯು ಶಾಡ್ವಲವು ಕರಿದಾಯ್ತು ಉರಿದು

'ಬಳಲಿದೆಯ ಬಾ' ಎಂದು ಕನಿಕರಿಸಿ ಕರೆದು
ಮೈದಡವಿ ಮುದ್ದಿಸಿದ ಎಳೆ ಬಳ್ಳಿ ಕುಡಿಯು,
ತೂಗಿದತ್ತಿಡಬಲಕೆ ಬಾರದಿರು ಎಂದು
ಬಳಿಗೆ ಬಿಡಲೊಲ್ಲದದು ಸಹಿಸುವೆನದೆಂತು?

ಅಯ್ಯೊ ನಿನಗಿಲ್ಲವೇ ಕನಿಕರವು ಮರುಕ
ಕುಕಿಲುತಿಹ ಹಕ್ಕಿಯುದು ನುಡಿಯುತಿಹುದೇನು?
ಮಾರ್ನುಡಿಯುಬರಿಯದಿದು ಎದೆಯಾಯ್ತು ಮೂಕ;
ಕಳಕೊಂಡ ಅರ್ಹತೆಯ ಪರಿಹಾಸವೇನು?

ಕಾಣ್ಬಗಿರಿ ನಿರ್ಜರಾರಣ್ಯಗಳು ಹೊಸಲು
ತಳ್ಳಿದುವು ಇದರಾಚೆ ನನ್ನನೆಳೆ ದೊಬ್ಬು!
ಬೆಳೆವ ಜಗದಳಲುಗಳ ಭೂರುಹದ ಬೇರ
ನಿನ್ನ ಕೃಪೆ ಹೊನಲರಿದು ಪೋಷಿಸಿದುದಂದು!

ಮೊದಲೆ ಕೃಷಿಗೈಯುತಿರೆ ಈ ಅಳಲೆಯಿಲ್ಲ
ಇದ್ದು ಸಾಯುವಗತಿಗೆ ಇಲ್ಲದುದೆ ಮೇಲು!
ನೀನಿಲ್ಲದಿಹ ಯಿರವು? ಹೋ ಸಾಕು ನಾನೊಲ್ಲೆ!
ಬಾವುಳಿಸು, ಇಲ್ಲದಿರೆ ನಿಂತು ನನ್ನನು ಕೊಲ್ಲು.

ಒಂದಿನಿತು ಅಳಲಿಲ್ಲ ಜಗದ ಬಡತನಕೆ
ನೀನಿರಲು ಕಲ್ಪತರು–ಭೋಗಭಾಗ್ಯಗಳಿಹವು
ಸಕಲ ಸೌಭಾಗ್ಯವಿದೆ–ನಿನ್ನೊಲುಮೆ ಮಳೆಗರಲು
ಉದರ ಪೋಷಣೆಗಾಗಿ ಕೃಷಿ ಮಾಡಬೇಕೆ?

ಇಂದು ಸುಡುಗಾಡಾಯ್ತು ಎನ್ನೆದೆಯುವನವು
ಕಡು ಬಡವನಾದೆ ನಾ ದೇಶಿಗನೆ ಬೇರಲ್ಲ;
ಅಯ್ಯೋ ನಿಂದುರಿದುದದು ನನ್ನ ಸ್ವಪ್ನ!
ನಿನ್ನೊಲುಮೆಯೊಡನೆನ್ನ ಕಿರಿದುಕೋ ಸೊಗವೆಲ್ಲ!

# ಮರಳು ಕಾಡು

ಎನ್ನ ಜನ್ಮದೊಳಗೊಂದು ಕಾಲವಿತ್ತೆಂದು ಎನ್ನ ಹೃದಯ
ನಿನ್ನ ಸೃಷ್ಟಿಯಲಿ ನಿನ್ನ ರೂಪುದನಿ ಗುರುತು ಹಿಡಿದೆನೆಂದು;
ಹಿಮದ ಮಾಲೆ ಶಾಡ್ವಲದ ಮೇಲೆ ಪ್ರಿಯತಮಳ ಕಿವಿಯ ಓಲೆ
ರವಿ ಕಿರಣ ಪ್ರೋಗಲು ವಿಧ ವಿಧದ ಬಣ್ಣದಲಿ ನಿನ್ನ ಕೃತಿಯಕಂಡೆ!

ನಾಲ್ಕು ದಿಕ್ಕಿನಲಿ ಗಿರಿಯ ಮಾಲೆ, ಬನ, ಸಮುದ ಪರವೆ ಬಳಗ
ನೆರೆದು ಮೆರೆಯೆ ನಾನಿರದೆ ಅರಿದೆ ನಿನ್ನಿರವನವುಗಳೊಳಗೆ
ನಿರ್ಜೀವವೆಂದು ಕರೆದವರ ಮಾತು ಪುಸಿಯೆಂಬುದೊರೆದೆ ನೀನು
ತೋರ್ದೆ ನಿನ್ನ ಕೃಪೆಯನ್ನು; ನುಡಿದೆ ಎನ್ನೊಡನೆ ನಿಂತುಕೊಂಡು

ಲಲನೆಯರ ನೊಸಲ ಸಿಂಗರಿಸಿ ಮೆರೆವ ಕುಂಕುಮದ ರಾಗಕಂಡು
ಸಲಿಲ ಭಾರದಿಂ ಮಣಿದ ಮುಗಿಲಿನೋಲು ಬಾಗಿತೆನ್ನ ಹೃದಯ
ಸೌಂದರ್ಯ ಜಲಧಿ ನೀನಿನಿತು ಚಿಮ್ಮಿ ಘನಿರೂಪವಾದ ಸತ್ಯ;
ಸೌಂದರ್ಯ ಸತ್ಯಗಳು ಒಂದೆ ಯೆಂದು ನಾನರಿದೆ ನಿನ್ನ ಕೃಪೆಯಿಂ.

ಆವೊಡಿಂದು ಎದೆ ಬರಿದೊ ಬರಿದು ಇದು ಮರಳು ಕಾಡಿನಂತೆ
ಮರೆಯ ಬೇಡೋ ಒಂದಿನಿತು ಕರುಣೆಯಲಿ ನೋಡು ಬದುಕುವಂತೆ!

# ಹಣತೆ

ಜಗವನೆಲ್ಲವ ಬೆಳಗಿ
ಹಿರಿಯನಾಗುವ ರೋಗ
ನಿನಗೇತಕೆಲೆ ಹಣತೆ?
ನಿನ್ನ ಮೂಲೆಯ ನೀನು
ಬೆಳಗಿಕೊಂಡರೆ ಯೇನು
ಬೆಳಕಿಂಗೆ ಕುಂದು ಬಂತೆ?

ಜಗಕೆ ಬೆಳಕಾಗಿಸುವ
ಹೊಣೆಯ ಹೊತ್ತವ ನೋರ್ವ
ಅದಕಾಗಿ ಇರುವನಲ್ತೆ?
ನಿನಗೇತಕಾ ಗೊಡವೆ?
ಬರಿಯ ಭ್ರಮೆ; ಎದೆ ನೋವೆ
ಹೆಬ್ಬಯಕೆ ಸುಮ್ಮನಲ್ತೆ?

# ಹೆಸರೇನ ಮಾಡುವೆಯೋ?

ಕೆಂಪು ಕಣ್ಬಿಟ್ಟಂತೆ,
ಹಳದಿ ಮೈ ವೆತ್ತಂತೆ,
ಕೃಷ್ಣಮೂರ್ತಿಯೆ ಕಣ್ಣು
ಪಿಳಪಿಳನೆ ಬಿಡುವಂತೆ
ಶ್ರೀಶೈಲದ ಡವಿಯೊಳು
ನೋಳ್ಪರಿಗೆ ಸೊಗವೀವ
ಪುಷ್ಪನಕ್ಷತ್ರಗಳ
ಹೆಸರೇನ ಮಾಡುವೆಯೋ?
ಹೆಸರಿಲ್ಲ ದವಗಳನು
ನೋಡಲಾರೆಯ ನೀನು?

ಕತ್ತಲೆಯ ರಾತ್ರಿಯಲಿ
ಮಲೆನಾಡ ಮಧ್ಯದಲಿ
ಬುವಿಯ ನಕ್ಷತ್ರದೊಲು
ಮರಿಮಿಂಚು ತೇಲುವೊಲು
ನೀಲಿ ಬೆಳಕಿನ ಗೆರೆಯ
ನೀರ ಮೇಲ್ ಎಳೆದಂತೆ
ಹಾರುತಿಹ ವೆನಿತೋ ಹುಳು
ಹೆಸರೇನ ಮಾಡುವೆಯೋ?
ಹೆಸರಿಲ್ಲದವುಗಳನು
ನೋಡಲಾರೆಯ ನೀನು?

# ಕಾರಂಜಿ

ಕಾರಂಜೀ ನೆಗೆವ ಕಾರಂಜಿ
ಬಣ್ಣದ ಕಾರಂಜೀ, ನಲಿವ ಕಾರಂಜೀ!

ನೆಗೆಯುವೆ ನೆಲದಿಂದ ಗಗನ ಮುಟ್ಟಲಿಕೆಂದು
ನೆಗೆಯಲಾರದೆ ನೆಲಕೆ ಬೀಳುವೆ
ಮಾನವನ ಮನಸಿ ನೊಳೇಳುವ ಆಸೆಗಳ್
ಎನ್ನಂತೆ ಎಂಬುದ ಪೇಳುವೋಲ್.

ಹಳದಿ ಹಸಿರು ಕೆಂಪು ವಿಧ ವಿಧದ ವರ್ಣವ
ತಳೆದು ನೀ ನೆಗೆಯುವೆ ಕಾರಂಜಿ
ಎನ್ನಂತೆ ನಿನ್ನಾಸೆ ವೈವಿಧ್ಯದಿಂದಿಹುದು
ಎನ್ನುತ ನೆಗೆಯುವೆಯಾ? ಕಾರಂಜಿ.

ಒಂದಾದ ಮೇಲೊಂದು ಬಣ್ಣ ಬಣ್ಣವ ತಳೆದ:
ಬಂದುದನನುಭವಿಸುವೆಯಾ? ಕಾರಂಜಿ
ಬಂದುದನು ಕೈ ಬಿಡದೆ ಹೋದುದನು ನೆನೆಯದಿ
ರೆಂದು ನೀಂ ಹೇಳುವೆಯಾ? ಕಾರಂಜಿ

ಮತ್ತೊಮ್ಮೆ ನೀನೀಗ ಗತವರ್ಣಗಳ ತಳೆದು
ಮುತ್ತುಗಳ್ ನೆಗಪುವೆಯಾ? ಕಾರಂಜಿ
ಹೋದೊಡೇನಾದುದು ಮರಳಿ ಬಾರದೆ ಇರದು
ಎಂದು ನೀನಂಹುವಿಯಾ? ಕಾರಂಜಿ

ಏನಾಯ್ತು ಕಾರಂಜಿ ಬರಿ ಬೆಳ್ಳಗಿರುವೆ ನೀ-
ನಿನಿತಾದ ರೊಳಿತಿಲ್ಲ ಕಾರಂಜಿ
ವೈವಿಧ್ಯವಿಲ್ಲದ ಜೀನವವು ಒಳಿತಲ್ಲ
ಎಂಬುದ ಪೇಳುವೆಯಾ? ಕಾರಂಜಿ

ಒಂದೊಂದು ದಿಶೆಯಲ್ಲಿ ಪುಟ್ಟಿ ನೀವೆಗರುವಿರಿ
ಒಂದೆಡೆಗೆ ಸಂತಸದಿ ಕಾರಂಜಿ.
ಸಮದೃಷ್ಟಿ ಬಂದಿರಲು ಎಲ್ಲ ಮತಗಳು ಒಂದೆ
ಸಮವೆಂದು ಹೇಳುವೆಯೊ ಕಾರಂಜಿ

ಆಸೆಗಳ್ ನಿಮಗಿರಲಿ ಸೋತೊಡಂ ಹೆದರದಿರಿ
ಈಸಿರೆನ್ನುತ ನಲಿವ ಕಾರಂಜಿ!
ನೆಗೆಯಿರೆನ್ನಂತೆಂದು ಪೇಳುತ್ತ ನಸುನಕ್ಕು
ನೆಗೆಯುರಾ ಸಂತಸದಿ ಕಾರಂಜಿ!

# ಗಾಳಿ ಪಟ

ನಿನ್ನೆ ನರಿತೆ ನೆಂಫೆಂಬ ಗರ್ವದಲಿ ಎಲ್ಲ ಮರತೆ ದೇವ!
ನಿನ್ನ ಕರುಣೆ ಎನಗಿರುವುದೆಂದು ಸೊಕ್ಕಾನೆಯಾದೆ ದೇವ
ದೊರೆತ ವಿಜಯ ನೀ ಮೆಚ್ಚಿ ಕರುಣಿಸಿದ ಮೆಚ್ಚು ನನಗೆ ಎಂದು
ಬರಿದೆ ಹಿಗ್ಗಿ ಹೆಚ್ಚಾಗಿ ಹುಚ್ಚು ನಾಮರುಳ ನಾದೆ ಬರಿದೆ.

ಅನಿತು ಬೇಗ ನೀನನಿತು ಸುಲಭದಿಂ ದೊರೆಯಲಾರೆಯೆಂದು
ಇನಿತು ಅರಿಯದೆಯೆ ದೊರೆತೆಯೆಂದು ನಾನೊರಲಿ ಕೂಗಿಕೊಂಡು;
ಹೆಮ್ಮೆ ಪಟ್ಟೆ; ಅಲ್ಲಲ್ಲ ಗರ್ವಿಸಿದೆ, ನೀನು ದೊರೆತೆಯೆಂದು:
ಕಣ್ಣ ಭ್ರಾಂತಿಯಿಂ ಕಂಡ ಕಿರಣವನೆ ನಿನ್ನ ಬೆಳಕು ಯೆಂದು.

ಸರ್ಪವನ್ನು ತಾನಿರ್ಪ ಠಾವಿನಿಂ ಬಯಲಿಗೆಳೆದು ತರಲು
ಕಪ್ಪೆಯನ್ನು ತೋರಿಸುತ ಕೆಣಕಿ ಅದರಸುವ ತೆಗೆಯುವಂತೆ
ಎನ್ನ ನೀನು ಕೆಣಕೆಣಕಿ ಗಾಳಿಪಟದಂತೆ ಮೇಲಕೊಯ್ದೆ.
ಎನ್ನ ಹೃದಯ ತಾ ಗರ್ವದಿಂದ ಬಿರಿತಾಗ ಸೂತ್ರ ಕೊಯ್ದೆ!

ಓ ದೇವ ದೇವ ಪರಮಾತ್ಮ ಬೀಳುತಿದೆ ಪಟವು ದಿಕ್ಕು ತಪ್ಪಿ
ಹೋ, ದೇವ ಅರಿಯೆ ಇದಕಾವಗತಿಯೊ: ಹೊಳೆಹಳ್ಳಕೊಳ್ಳವೇನೊ

# ಜೀವ ಹನಿ

ಕಮಲ ಪತ್ರದ ಮೇಲೆ ಬೀಳುತಿದೆ ಸೋನೆ ಹನಿಯು ಬಿಡದೆ
ತುಮುಲವಿಲ್ಲ ಮೊದಮೊದಲು ನೋಡೆ ಬಹು ಸೊಗವು ಜೀವಹನಿಯು!
ಮೇಲೆ ಮೇಲೆ ತಾ ಬೀಳುತಿಹವು ಹನಿ ಕಮಲ ಪತ್ರದಲ್ಲಿ
ಕಾಲ ಸಮೆಯೆ ಹನಿಗೂಡಿ ಹಿರಿದು ತಾನಾಗಿ ಭಾರವಹುದು.

ಭಾರದಿಂದ ತೊನೆಯುವುದು ತೂಗಿ, ಹನಿಪತ್ರದಿಂದ ಜಾರಿ
ಆಗ ಈಗಲೋ ಯಾವ ಘಳಿಗೆಯೋ ಬೀಳುವಂತೆ ತೋರಿ;
ಗಾಳಿ ಬೀಸುವುದು, ಪತ್ರ ತೂಗುವುದು; ಕುಡಿದ ಮನುಜನಂತೆ
ಆತ್ಮ ದೇಹದೊಳು ಸಿಲುಕಿ ಜಗುಳಿ ಒದ್ದಾಡುವಂತೆ ರೋಸಿ.

ನಿನ್ನ ನಿಯಮ ಓ ಸ್ವಾಮಿ! ಗುರುವೆ! ಜಗುಳುವುದು ಹನಿಯು ಕೆಳಗೆ
ನಿನ್ನ ನಿಯಮಕೊಳಗಾಗಿ ಮತ್ತೆ ಕೂಡುವುದು ಹನಿಯು ಬಿಡದೆ

# ನಾನಳಿದು ಹೋಗಲ್ಕೆ!

ದುಗುಡ ದುಮ್ಮಾನಗಳ ಕೊಡತಿಯಿಂ ಕುಟ್ಟೆನ್ನ
　　ಗರ್ವ ತುಂಬಿದ ಎದೆಯು ಹಣ್ಣಾಗುವನ್ನಂ:
ಸೋಲು ಅವಮಾನಗಳ ಈಟಿಯಿಂ ಇರಿಯೆನ್ನ
　　ನಾನೆಂಬ ಮಾಯೆ ತಾಂ ಮುರಿದು ಮಣಿವನ್ನಂ

ಎನ್ನಾಪ್ತರೆಲ್ಲರೂ ಧಿಃಕ್ಕರಿಸಿ ದೂರಿಡಲಿ
　　ನೀನೆ ದಿಕ್ಕೆನಗೆಂದು ನಾನರಸಿ ಬರುವನ್ನಂ;
ನಿಂದೆ ಆರೋಪಗಳ ಸುರಿಮಳೆಯು ಸುರಿಯಿಸಲಿ
　　ನಿಂದೆ ನಿಂದಪರೆಲ್ಲ ನೀನೆ ಎಂದರಿವನ್ನಂ!

ಯಾರೊ ಕರುಣೆಯು ನೆಚ್ಚಿ ಯಾಕೆ ಬಾಯ್ಬಿಡಬೇಕು
　　ನೀನೆ ನಿಷ್ಕರುಣೆಯಿಂ ಹಿಡಿದೆತ್ತಿ ಕೊಳ್ಳದಿರೆ?
ನಿನ್ನ ಕೃಪೆ ಸಿಡಿಲೆರಗಿ ನಾನಳಿದು ಹೋಗಲ್ಕೆ
　　ಎನ್ನಹಂಕಾರವಳಿದೆಲ್ಲ ನಿನ್ನಡಿಗಳಲಿ ಸೇರಲ್ಕೆ!

# ಅವನ ಮನೆ ನಿನ್ನ ಮನ

ಛೀ! ಮನವೆ ತಳ್! ಎಳಸದಿರು ಪಾಪಕ್ಕೆ; ನೋಡದಿರು
　ಬಾಯ್ದೆರೆದು ಪರರ ಮೆಯ್ಯ ಮೆರಗು ರೂಪಕ್ಕೆ;
　ನಿನ್ನದಾವಡವೆಯುಳ್ಳಿಂದ ಬಳಿಕಾ ಬಯಕೆ
ದಾಂಗುಡಿವರಿಯೆ ಕತ್ತರಿಸು! ಚವುಟಿ ಮುಸುಗದಿರು!
ಇರಬಹುದು ನೂರುಮಡಿ ಮಿಗಿಲಾದ ಸೌಂದರ್ಯ
　ಸಂಪದಂ ಜಾಣತನ ನಿನ್ನದಕ್ಕಿರುವುದಕಿಂತ;
　ಆದರದು ನಿನ್ನದಲ್ಲೆಂಬ ನಿನ್ನರುವಿನಾ ರವಿಗಿಂತ
ಹಿರಿದೆಂಬ ಭ್ರಾಂತಿ ಬೇಡಲೆ ಮರುಳೆ! ದುಷ್ಕಾರ್ಯ
ಹಾ! ನೋಡದಿರು ಬಯಕೆಗಣ್ಣಿನಿಂ ಅದನು!
　ಅದರಿಂದ ನಿನ್ನ ಈಶ್ವರಾರ್ಪಿತ ಹೃದಯಪೀಠಮನ್
ಮುಡಿಯ ಹೂ ಉದುರಿ ಪದ ಹತಿಯಿಂದ ಪಾಳ್
　ಗೈದ ವೊಲೆ ಹುಡಿಗೈಯದಿರು; ನಿಲಿಸು ಮನವನು;
ಅವನ ಮನೆ ನಿನ್ನ ಮನ; ಗೈಯ್ಯದಿರಪನಮಂಗಳಂ
ನಿಲಿಸದಿರು ಅವನ ಜಾಗದೊಳ್ ಕೆರಳ್ವ ಮರುಳ್ಗಳಂ!

# ನಮೋ ನಿನಗೆ ಭಿಕ್ಷುಕಿಯೆ!

ಸಂಕಲ್ಪ ಮಾತ್ರದಿಂ ಲೋಕ ಲೋಕಂಗಳನು
ಸೃಷ್ಟಿಸುವ ಮರ್ದಿಸುವ ಪಾಲಿಸುವ ಸರ್ವ ಶಕ್ತಂ;
ಸಕಲಸಿರಿ ಸಂಪದಕೆ ಶ್ರೀವಲ್ಲಭ ವಿರಕ್ತಂ;
ಜಗವ ಕಣ್ ಕಿವಿಮೂಗು ಕೈಕಾಲು ಮನಸವನು
ಆದ ನೀನೆ ದೇವನಿಂತು ದೈನ್ಯದಿ ಬಂದು
ಕುರುಡ ಹೆಳವಂ ಮೂಗ ಕ್ಷುಲ್ಲಕ ಕುರೂಪದಲಿ
ನಾನಾ ಸ್ವರೂಪದಲಿ ಮೈವೆತ್ತು ನಿಂದು ಬಾಗಿಲಲಿ
ಬಾಯ್ದೆರೆದು ಬೇಡುತಿಹೆ ಒಂದಗುಳನಿಕ್ಕೆಂದು!
ಎನ್ನ ಅಹಂಕಾರವೆದೆಗೊದ್ದಂತೆ ಗುರುಡ ಹರಿ
ಯುವ ಹಾವ! ಓ, ದೇವ ಏನಿದೀ ನಿನ್ನಾಟ
ಮನುಜರಹಂಕಾರದಿಂ ಕೊಡುವೆಲ್ಲ ಕಾಟ
ಗಳ ಸಹಿಸುತಿಹೆ ನಾವ್ ಸಿಗ್ಗಿನಿಂ ಮಣಿವ ಪರಿ!
ನಮೋನಿನಗೆ ಭಿಕ್ಷುಕಿಯೆ! ನೀನೆನಗೆ ಗುರುಮಾತೆ!
ನೀನವನ ಪ್ರತಿನಿಧಿಯೆ! ಅವನ ದರ್ಶನದ ದಾತೆ!

# ನಿಸಾರ್ಗೆ ಚೆಲುವೆ?

ಚಂದ್ರ ಮುಖಿ ನಾ ಚೆಲುವೆ ಲಾವಣ್ಯಮಯ ಚೆನ್ನೆ,
ಯೋಗಿ ಮುಗಿದಕ್ಷಿಗಳ ದಿಗಿಲಿನಿಂ ತೆರೆಯಿಸುವ
ಚಂಚಲಾಕ್ಷಿಯು ಧೀರೆ; ಕಾಮಾರಿಗಳ ಕೊಲುವ
ನಿಡು ಜಡೆಯು ಪಾಶಗಳ ನೀರೆ; ಸೊಬಗಿನ ಕನ್ಯೆ
ನಾನೆಂಬ ಬಿಂಕದಿಂ ಉಬ್ಬಿದೆದೆಯಿಂ ಧಟ್ಟೈ
ನವಿಲ ಕುಣಿತವ ಕುಣಿದು ಬೀಳದಿರು ನೀರೆ!
ನಾಳೆ ನಿನ್ನ ವಯುವಕೆ ಮುಪ್ಪಡರಿ ಸಾವು ಜರೆ
ಮೋಹದಿಂ ನೇವರಿಸಿದಾ ಕೂದಲನೆ ಮುಟ್ಟ-
ಲಿಕೆ ಹೇಸಿ ದೂಡುವರು ದೂರ ಕಾಲಿಂದೊದೆದು!!
ಅಲ್ಲದೆಯೆ ನೀಸಾರಾರ್ಗೆ ಚೆಲುವೆ ಓ ಕುರೂಪಿ?
ನಿನಗಿಂತ ಚೆಲುವಾಗಿ ತೋರುತಿವೆ ಆ ಗೋಪಿ!
ನಿನ್ನ ಸೃಷ್ಟಿಸಿದವನ ಸೌಂದರ್ಯರಾಶಿಗಿದು
ಸ್ವರ್ಗೀಯ ಗಾನಕಿದು ಕಾಗೆಯ ರಾಗವಿದ್ದಂತೆ!
ಇದ ನಚ್ಚಿದರೆ ನಾಕದಿಂ ನರಕಕಿಳಿದಂತೆ!

# ಲೋಕ ರಥದಲಿ ಕುಳಿತು

ತನ್ನೊಡೆಯ ನೂರಿಂಗೆ ಪಯಣ ಬೆಳಸಿದನೊಂದು
ಹಗಲಿರುಳು ಚಕ್ರಗಳ ಲೋಕ ರಥದಲಿ ಕುಳಿತು,
ಹತ್ತಿ ಇಳಿಯುವಲಕ್ಷಕೋಟಿ ಜನರೊಳು ಬೆರೆತು;
ಜೊತೆಯಿರಲು ತಂದೆ ತಾಯ್, ಮಡದಿ ಮಕ್ಕಳು ಎಂದು
ಏನೇನೊ ಸಂಬಂಧ ಕಲ್ಪಿಸಿದ ನೂರಾರು!
ಬರುವವರಿಗಂಗೈಯ ಅಗಲ ಜಾಗವ ಕೊಟ್ಟು
ತಾನ್ ತಿನುವ ಫಲಹಾರದೊಳಗೊಂದು ತುಸುಕೊಟ್ಟು
ಋಣವಿರುವ ತನಕೊಂದೆ ಗಾಡಿಯೊಳು ಕುಳಿತಿದ್ದು!
ಅವರವರ ಊರು ಬರೆ ಇಳಿದಿಳಿದು ಹೋಗುವರು
(ಇಳಿವವರಿಗೊ? ಅತಿ ಹರುಷ ಪಯಣ ಕೊನೆಯಾಯ್ತೆಂದು)
'ಅಯ್ಯೋ! ಇಳಿದರೆ' ಯೆಂದು ಗೋಳಾಡಿ ಬೀಳ್ಕೊಳುವರೆ?
'ಇಳಿಯುವಿರಾ? ಹೋಗಿ ಬನ್ನಿರಿ; ಶರಣು! ಎಂದು
ಕಳುಹಿಸಿಕೊಟ್ಟು, ಮುಂದೆ ಪಯಣಿಸುವಂತೆ
ನಗು ನಗುತ ನಡೆಯಿರೈ ರೋಸಿಗೆಯು ಬರದಂತೆ!

# ಸಂಕ್ಷಿಪ್ತ ಶಬ್ದ ಬ್ರಹ್ಮ

ಅಲ್ಲ! ನೀನಲ್ಲ! ಸಾಮಾನ್ಯ ಮಾನವಳು ನೀನಲ್ಲ!
ಓಂಕಾರ ರೂಪಿ ನಿಶ್ಶಬ್ದ ಪರಬ್ರಹ್ಮ ಶಕ್ತಿಯೇ
ಒಡಲ ತಾಳ್ದಂತು ಬುವಿಗಿಳಿದ ಮಹಾ ತಾಯಿ!
ನಮೋ ನಿನಗೆ! ಋತಚಿತ್ ಪ್ರತಿಮೆ; ವ್ಯೈಯಿಲ್ಲ-
ದವನರಸಿ, ಓ, ಸುಬ್ಬುಲಕ್ಷ್ಮೀ! ನೀಂ ಸಂಕ್ಷಿಪ್ತ ಶಬ್ದ ಬ್ರಹ್ಮ
ನಿನ್ನ ಬಳಿ ಸುಳಿಯಲಾರದು ಬಂದು ನರರ ಅಸ್ತಿತ್ವ!
ನೀನೊಂದು ಅವತರಿಸಿರುವ ಮಹತೋ ಮಹತ್ವ!
ನಿನ್ನ ಕಂಠಧ್ವಾನ ಬರಿಯ ಹಾಡಿಕೆಯಲ್ತು; ನಮ್ಮ
'ಹಂಕಾರದುರಿಯಂ ನಂದಿಸಲ್ ಬರುವ ಸೋನೆ ಮಳೆ!

ಕಂಠವೋ? ಕಂಚೋ? ದೇಹವೋ ವೀಣೆಯೋ?
ಎಲ್ಲವನು ಒಳಕೊಂಡ ಓಂಕಾರ ರೂಪಿಣಿಯೋ?
ಸೃಷ್ಟಿಯುದ್ದೇಶ ತಾಂ ಸಫಲವಾಯ್ತಿಳೆಯೊಳ್!
ಎದೆಯ ಬಯಕೆಯ ದನಿಯು ನಿನ್ನ ದನಿಯುಲಿ
ದಡವ ಸೇರ್ವುದು! ಕೊಳ್ ನನ್ನ ಬಾಷ್ಪಾಂಜಲಿ!

# ಮೌನ ವ್ರತ

“ಮೌನವೇ ಮೈವೆತ್ತು ಶಿಲೆಯಾಗಿ ಕುಳಿತಂತೆ
ಕಣ್ಣು ಬಾಯ್ ಕಿವಿ ಮೂಗು ಮುಚ್ಚಿ ಕುಳಿತಿರುವೇಕೆ
ಮನದ ಮಡುವಿನ ನೀರು ಮಲೆತು ನಿಲ್ವುದು ಜೋಕೆ!
ಇಂದ್ರಿಯಂಗಳಭಿಲಾಷೆ ತುಳಿಯೆ ಮೋಕ್ಷವು ಬಂತೆ?
ತೆರೆಕಣ್ಣು; ಕಾಣುವುದು ಶಿವರೂಪು ಹಬ್ಬಿಹುದು ಜಗದಗಲ;
ಇಲ್ಲಿರದುದೇನಿಹುದು ಅಲ್ಲಿ? ನಿನಗೆಲ್ಲೊ ಒರಿಯ ಭ್ರಮೆ!
ಶಶಿತಾರೆ ಶಿಶುನೀರೆ ಎಲ್ಲರಲು ಈಶ ಉಮೆ
ತಾವೆ ಮೈವೆತ್ತಿರಲು ಕಣ್ಮುಚ್ಚಿ ಕುಳಿತುದು ನಿಷ್ಫಲಂ!”
ಕುಳಿತ ಮುನಿ ಕೇಳಿದನು ಇದನೆಲ್ಲ ಬುಡುಬುಡುಕೆ
ಎವೆ ತೆರೆದು ಕಿರುನಗೆಯ ಬೀರಿ ನುಡಿದನ್:
“ಮನದ ಮನೆ ಕಸ ಗುಡಿಸಿ ಕಿಟಿಕಿ ಬಾಗಿಲು ತೆರೆಯೆ
ಗಾಳಿ ಬೆಳಕುಗಳಿಂದ ಗೃಹವಾಸಿ ಸುಖವ ಪಡೆವನ್!
ಇಲ್ಲದಿರೆ ಗುಡಿಸುವಾಗಲೆ ಮನೆಯು ಕದ ತೆರೆಯೆ
ಗಾಳಿಯೊಳನುಗ್ಗಿ ಮತ್ತಿಷ್ಟು ಕಸವ ತಂದೊಟ್ಟೀತು!”

# ಮಹಮದ್ ಪೈಗಂಬರನಿಗೆ

ಓ ಗುರುವೆ ಮಹಮ್ಮದನೆ ಇಳಿದು ಬಾ ಇಳೆಗಿಂದು!
   ನಿನ್ನ ಅದ್ವೈತವನು ಹಿಂದುಗಳ ದ್ವೈತದಲಿ ಬೆರಸುವುದು;
   ಎರಡು ಹುರಿಗಳ ಬಹಳ ಪ್ರಬಲ ಜಾತಿಯು ಹೊಸೆದು
ಹೇಡಿಗಳು ಸಾವಾಗಿ ಒಳಕಲಹದಲಿ ಮಿಂದು,
ದಾಸ್ಯ ಶೃಂಖಲೆಯನ್ನು ತಮಗೆ ತಾವ್ ತೊಡಿಸಿರುವ
   ಹಿಂದು ಮಹಮ್ಮದಿಯರಂ ಜಾತಿಯಿಂ ಬಿಡಿಸುವುದು!
   ಚೈತನ್ಯವೀಯುವುದು; ಐಕ್ಯತೆಯ ನೀಡುವುದು!
ನೀ ಸಾರಿದೆ ಒಬ್ಬನಿಹನೆಲ್ಲರಿಗು ಆ ದೇವನೆನ್ನುವವ
ಆದೊಡಂ ಈಗೇನು ನಡೆಯುತಿಹುದು!

   ಎಂದು ಬಹುದಾ ದಿನವು ನೀವು ನಮ್ಮಯ ಗುಡಿಗೆ
   ನಾವು ನಿಮ್ಮಯ ಗುಡಿಗೆ ಕೈಕೊಟ್ಟು ನಡೆಯುವುದು;
ಎಲ್ಲದಕು ಮಿಗಿಲಾಗಿ ಸ್ವರ್ಗವದು ಬಿಡುಗಡೆಗೆ:
ಬಿಡುಗಡೆಗೆ ಮುನ್ನುಗ್ಗಿ ಆಳ್ವವರ ಓಡಿಪುದು
   ಮಾನವರ ವಾಸಕ್ಕೆ ಜಗವ ನಂದನವ ಮಾಡುವುದು?

# ಅಮರ ಸಂದೇಶ!

ಸರ್ವಶಕ್ತನು ತನ್ನ ಅಮರ ಸಂದೇಶವನು
 ಅಮೃತವಾಣಿಯೊಳೆಂದು ಪ್ರಕಟಿಸಿದನಿಳೆಗೆಲ್ಲ:
 “ಯಾರೆಂದು ಕೂಗಿದೊಡೆ ಕುಂದು ಆತನಗಿಲ್ಲ!
ಆತ ಆತ್ಮಚ್ಯುತರಿಗರುಹಲಿಕೆ ಸತ್ಯವನು
ಆತ್ಮಜ್ಯೋತಿಯು ಬೆಳಗಿ ಬೀರಿದನು ಪ್ರಭೆಯು!!
 ಸತ್ಯವಂ ವಧಿಸಲಿಕೆ ಗೆಯ್ದ ಯತ್ನವನೆಲ್ಲ
 ಉಳುಹಿದಂ ಆತ್ಮ ಪಾವಕದಿಂದ ಸಟೆಯಲ್ಲ!
ತಿಳಿಸಿರಿ ಗಾಂಧಿಯೆನ್ನುವುದೊಂದು ಶಕ್ತಿ!”
ನಿಜವು ವಾಣಿಯು ಕೇಳಿ ಮಾಡಿದುದು ಭಕ್ತಿ
 ಅಲ್ತು ನೀಂ ಮಾನವನು; ದೇವ ಮಾನವ ನೀನು
 ಬಗೆದೊಡೀ ವಿಶ್ವವನು ಹುಡಿಗೈಯ್ವ ಶಕ್ತಿ!
ಓ ದೇವ ಮುಕ್ತಾತ್ಮ ದೇವ ದೂತನು ನೀನು
ನಿನ್ನ ಮಹಿಮೆಯನರಿಯೆ ಸಾಮರ್ಥ್ಯವೇನು?

# ಅಂಬಾ

ಬಿಡುಗಡೆಯ ಹಿರಿನುಡಿಯ ಕೈತವದ ಮುಸುಕಿನಲಿ
ನಡೆಯುತಿಹ ದುಷ್ಕೃತ್ಯ ತಾಂಡವವ ನೀಕ್ಷಿಸಲು
ಬೇಡಾಯಿತೆನ್ನುವೊಲು ಕಣ್ಮುಚ್ಚಿ ಸುಖಿಸುವೊಲು
ಮುಚ್ಚಿದೆಯ ಆಲಿಗಳ ನಿಲಿಸಿ ಮನ ಬ್ರಹ್ಮದಲಿ!
ಭಾರತೀಯರ ಬಾಳ ದುರ್ಗಂಧ ದೂಡಲಿಕೆ
ತನ್ನ ಬಾಳನು ಬೇಳ್ವ ಸಿರಿಗಂಧ ಹೆಮ್ಮರನ
ಅಪ್ಪಿ ತನ್ನಿನಿದಾದ ಪರಿಮಳದಿ ಮುದದಿನನ
ಮೆಚ್ಚುಗೆಯ ಪಡೆದು ನೀಂ ಮಡಿದೆ; ನಮ್ಮೀಜನಕೆ!
ಇರುವೆನೆಂದೊರೆಯುಡೆಯೆ ಜೀರಿ ಕಂಪನು ಜಗಕೆ
ಕಸ್ತೂರಿ ಮೊರೆಯುವೊಲು ಒಂದಿವೆ ಕೊನೆಯೊಳಗೆ
ಗಂಧ ಕಸ್ತೂರಿಗಳ ಪರಿಮಳವು ಬೆರೆತಿಳೆಗೆ
ಸೌರಭವನಿತ್ತಗಲಿ ಒಂದಾಯ್ತು ಗಂಧವೀ ಜಗಕೆ!
ಪೂತೆ ಸೀತೆಯ ಪೋಲ್ವ 'ಬಾ'ಕೊಳ್ಳು ಅಂಜಲಿಯ
ಪಾಪಿ ತೋರುವನೆಂತು ನಿನಗೆ ಸರಿ ಮನ್ನಣೆಯ!

ಶ್ರೀ ಕಸ್ತೂರಿಬಾ ಅವರು ೨೨-೨-೪೪ರಂದು ಸ್ವರ್ಗಸ್ಥರಾದಾಗ.

# ವೀರ ನಾರೀಮಣಿಗೆ

ಕ್ರೂರ ದಬ್ಬಾಳಿಕೆಯ ರಾಕ್ಷಸೀ ಕುಣಿತಕ್ಕೆ
ಶಿಲುಕಿ ಅಸುವಂ ಬಿಟ್ಟ ವೀರ ನಾರೀಮಣಿಯೆ,
ಮಣಿವೆ ಸೋದರಿಯೆ, ಎನ್ನ ಮನದಣಿಯೆ
ಸ್ವೀಕರಿಸು ಅಂಜಲಿಯ ಬೇಡುವೆಂ. ರಾಷ್ಟ್ರಕ್ಕೆ
ಅಪಮಾನ ಸಂದುದೆಂದರಿದು ನೀಂ ಶೌರ್ಯದಿಂ
ಮುನ್ನುಗ್ಗಿ ಅಸುವಿತ್ತ ನೀನಲ್ತು ಮಡಿದವಳ್!
ಅಪಮಾನಮಂ ನುಂಗಿ, ತಲೆವಾಗಿ ನಿಂದ ಪಂದೆಗಳ್
ಸಾವು; ನೀಂ ನಿತ್ಯಳೌ ತಾಯೆ! ಇರ್ಪೆ ಸಂತೋಷದಿಂ!
ನಿನ್ನ ಚಿತೆ ಚಾಚುತಿಹ ಜ್ವಾಲೆಯುಂ ಅನುಕರಿಪ
ರೋಷ ಸರ್ಪವು ನಮ್ಮ ಹೃದಯದೊಳ್ ಹೆಡೆ
ಎತ್ತಿ, ಭೋರ್ಗರೆದು ನೆಚ್ಚಳಿದ ಹೃದಯಕ್ಕೆ
ಕೆಚ್ಚು ನೀಡುತಿದೆ, ಹಿಡಿಸಿ ಹುಚ್ಚಂ! ನಿನ್ನನೆಮ್ಮೆಡೆ-
ಯಿಂದ ಕೊಂಡ ಅಧಮರ ಕೊಲೆಗೆ ಕೊಳ್ಳೆ ನೀ ಪೂಣ್ಕೆ:
ನೋಡಿದೋ ಸೋದರಿಯೆ: ಕಾಲರುದ್ರನ ತೆರದಿ
ನಿನ್ನ ಭಸ್ಮವ ಧರಿಪೆನ್, ಎರಗುವೆನ್ ಸಿಡಿಲಿನಾ ಭರದಿ!

# ನಿರಂಕುಶಾಧಿಕಾರಕ್ಕೆ

ಧೂರ್ತ ದೈತ್ಯ ದೌರ್ಜನ್ಯಮಂ ನಿಲಿಸು ಓ ನಿಲಿಸು!
ಗುಂಡಿಕ್ಕಿ ಕೊಂದು ಹಣಿದು ಮಣಿಸುವೆನೆಂಬ ಸೊಕ್ಕು
ಹುಸಿ ಹುಮ್ಮಸದು ಬೇಡ; ನಿನ್ನಿರುವಿಕೆಗೆ ಅದೆ ಮುಳ್ಳು
ಉಳಿವಾಸೆ ಇರ್ದೊಡಾ ಜನತೆಯಾಕಾಂಕ್ಷೆಯಂ ಸಲಿಸು!
ಇಲ್ಲದಿರೆ, ಪ್ರಲಯ ಜ್ವಾಲೆಯು ಸ್ಫೋಟಿಸ್ವ ಕುಪಿತ ಪ್ರಜಾ ಇಷ್ಟ
ನಿನ್ನಂಥ ನೂರಾರು ಜಿಗಳೆಗಳ ಸೆಕ್ಕಿ ನುಂಗುವುದು;
ತುಳಿಯುವೆನ್ ಎಂಬ ನಿನ್ನ ಕಾಲ್ ಕಚ್ಚಿ ಅಗಿಯುವುದು;
ಮಹಾ ಹಿಮರಾಶಿ ಕೊಚ್ಚಿ ಬರೆ ತಡೆಯುವುದೆ ರಾಜದಂಡದ ಕಾಷ್ಠ?
ಕೆನ್ಯ್ಯಾಟ ದೊರೆಗೆದ್ದು ಅನುಚಿತ ಶಾಸನವ ಗೈಯುವೆಯೊ?
ಹಿಂದೆ ನಿನ್ನಂತೆ ನೂರಾರು ರಾಜರ್ ಜನರೊಡನೆ ಕಾದಿ
ತಮ್ಮವಸಾನವನೆ ಆಮಂತ್ರಿಸಿದ ಕರುಣ ಕಥೆ ಕೇಳೆಯಾ?
ನಿರಂಕುಶಾಧಿಕಾರಮನ್ ಬಯಸಿಕೊಳ್ಳದಿರು ನವ ಬಾದಿ!
ಜನತೆಯುಪಕಣಿಗೆಯ್ಯುತಿದೆ ಚಂದನವ ಕಡಿಮಟ್ಟಿ
ಬಿಡುಗಡೆಯ ಸಾರುವುದು ಬಂಧನದ ಬೇಡಿಗಳ ಪುಡಿಕುಟ್ಟಿ!

# ಏಕಿಂತು ಮೌನ?



ಭಾರತೀಯರೆ ನಿಮ್ಮ ಬಾಳ್ವೆ ಇಂತಾದುದೇ?
 ಜಸವಡೆದ ವೀರ ಮಾತೆಯ ಬಸಿರ ಸುತರೆನಿಸಿ
 ಅಮರ ಕೀರ್ತಿಯಹೊತ್ತ ಸಮ ವೀರರೊಳು ಜನಿಸಿ
ಹಿಡಿ ಅಸಕ್ತ್ಯತಂದ ಭಿಕ್ಷುಕರಿಗಳುಕುವುದೆ?
ಸಗ್ಗದೊಳು ಪಿತರೆಲ್ಲ ಕಿಲಕಿಲನೆ ನಗುವಂತೆ!
 ನಮ್ಮವರು, ನಮ್ಮವಳು, ನಮ್ಮದೆಂಬುದನುಳಿದು
 ಖಗಗಳೊಳು ಚಂಡಾಲ ಕಾಗೆಯಿಂ ಕಡೆಯುವದು
ನಿಮ್ಮ ಬಾಳ್ವೆಗಳೆಂದು ಕಡೆಗಣಿಸಿ ನುಡಿವಂತೆ!
ಹೇಳು ನಿನ್ನೊಳು ವೀರರಕುತನುಳಿಪ್ಪುದೆನಿಸಿತು
 ಎನಿತು ಸ್ಪಂದಿಪೆ ನೀನು ನಿಮ್ಮವರ ದುಕ್ಕದಿಂದೆನಿತು
 ಕುದಿದು ಬಾಯ್ಬಿಟ್ಟೊರಲಲ್ ಅಲುಗದಿರೆಯೇಕೆ?
ಎಲವೊ ಪೇಡಿಯೆ, ಏಳು, ಬಂಧುಗಳ ಕಾಪಿಡಲು
 (ನಾಚಿಕೆಯ ತೊರೆದಿಂತು ಮೌನದಿಂದಿರುವುದೇಕೆ?)
 ತಾಗಿದೊಡೆ ಬಾಗಿಪುದು ಸಿದ್ಧವೆಂದರಿಪುದಕೆ!

# ಕಟ್ಟೈತಿರುವಾ ಮುಡಿಪು

ಭಾರತೀಯರ ಜಾಳ ಬಾಸಿನಲಿ ಕವಿದಿಹುದು
ನೌಕರರ ದರ್ಪವದು ಮೋಡಕಿಂ ಮಿಗಿಲಾಗಿ;
ಅವರ ಮಾತಿರುತಿಹುದು ಗುಡುಗಿನಾ ಪ್ರತಿಯಾಗಿ,
ನಿರ್ದಯದ ನೋಟವದು ಮಿಂಚಿನೊಲು ಮಿಂಚುವುದು;
ಹಣವೆಂಬ ಕಣ್ಣೀರು ಸೋನೆಯೊಲು ಸುರಿಯುತ್ತೆ!
ಆ ನೀರೆ ಸಾಗುತಿದೆ ಸಿರಿಲತೆಯ ನಿಡು ಬೆಳೆಗೆ
ಆ ಹಣವೆ ಕಟ್ಟೈತಿರುವಾ ಮುಡಿಪು ದೇವರಿಗೆ
ಅವರ ವಂಶದ ನಾಶ ಮಂತ್ರವನು ಜಪಿಸುತ್ತೆ!
ಆಗದಿರುವುದೆ ನಾಶ ಹೇಳಿರೈ ಬಾಂಧವರೆ
ಇನಿತು ನಿಷ್ಠೆಯನಾಂತು ದೇವನಡಿಗಳಿಗೆರಗೆ?
ಬೆಂದೊಡಲ ಬಾಂಧವರು ಬಿಸಿಯುಸಿರ ನೊಸರುವರು
ಒಣ ತೊಗಲಿನಾ ಉಸಿರು ಕರಗಿಪುದು ಲೋಹದೊಳು
ಅತಿ ಕಠಿಣಮೆನಸಿರುವ ಕಬ್ಬುನವ; ಆರು ಒರೆವರು
ಲತೆಯು ಮುರುಟದಿರ್ದಪುದೆಂದು ಬಡ ರೈತನುಸಿರಿನೊಳು?

# ಮುಚ್ಚದಿರು ಚೈತ್ರಾಕ್ಷಿ

ಊರ್ಧ್ವ ಮುಖಿನೀನಾಗು! ನೋಡು ಮೊಗವೆತ್ತಿ
ಕಾಣುವುದು: ಮಂಗಳವು ಮೈವೆತ್ತು ನಿಂದಂತೆ
ಸುರಿದು ಬಿದ್ದಿದೆ ಪ್ರೇಮ ಸೌಂದರ್ಯ ಸಾತ್ವಿಕತೆ;
ನಿನ್ನ ಹಿರಿತನ ಬಯಸಿ ಜಗವೆಲ್ಲ ತೋಳೆತ್ತಿ
ಹರಸುವಂದದಿ ಎನಿತೊ ಶ್ರೀ ಆತ್ಮಗಳ್ ಬೆಳಗುತಿವೆ!
ಬೆಳಕಿನಲಿ ಬೆಳಕುಂಡು ಬಾಳ್, ಅದಕೆ ಬದುಕೆಂಬರ್!
ಇದನುಳಿದು ಕ್ಷುಲ್ಲಕ ಕುರೂಪತೆಯ ನೋಡದಿರ್
ನೋಡಿದರೆ ದೊರೆವುದದು ಬರಿ ವ್ಯರ್ಥ ಎದೆ ನೋವೆ!
'ಪಾರದೆಡೆ ಹಾರುತಿಹ ಆತ್ಮ ಪಕ್ಷಿಗಳಕ್ಷಿ
ಕೆಳಗಿರುವ ಅಲ್ಪಾತ್ಮರಲ್ಪತನವೆಂಬಡಗು
ನೋಡಿದರೆ ಜಾರುವುದು! ಹಾ ಎಂಥ ಎದೆ ಕೊರಗು!
ಅಲ್ಪರಲ್ಪ ತ್ವಮಂ ನೆನೆದು ಮುಚ್ಚದಿರು ಚೈತ್ರಾಕ್ಷಿ!!
ಮುಚ್ಚಿದರೆ ಪರರಲ್ಪತನಕಾಗಿ ನೀ ಶಿಕ್ಷೆ
ಉಣಬೇಕು; ಪಾರಾಗು, ಮುಂದೆ ಬರುತಿದೆ ಪರೀಕ್ಷೆ

# ನನ್ನಾಸೆ

ಕಾಷಾಯವನು ಉಟ್ಟು
ಕಾಲ್ನಡಿಗೆಯಲಿ ತಿರುಗಿ
ದೈನ್ಯದಲಿ ತಿರಿತಿರಿದು
ಭಿಕ್ಷಾನ್ನ ತಿನ್ನುವುದು ನನ್ನಾಸೆ!
ಎಂದು ಸಲುವುದೊ ನನ್ನ ಈ ಆಸೆ!

ಬೆಳುದಿಂಗಳಿರುಳಿನಲಿ
ಬೆಳಗಾಂವಿ ನಾಡಿನಲಿ
ಕುಳಿತು ಏಕಾಂತದಲಿ
ತಪಗೈಯ್ಯಬೇಕೆಂಬುದೆನ್ನಾಸೆ!
ಎಂದು ಸಲುವುದೋ ನನ್ನ ಈ ಆಸೆ!

ಬೇಸಗೆಯ ಬಿಸಿಲಿನಲಿ
ಮಾಮರದ ನೆರಳಿನಲಿ
ಮಲಗಿ ತುಂಬಿಗಳುಲಿವ
ಓಂಕಾರದೊಳಗಾಗುವೆನ್ನಾಸೆ!
ಎಂದು ಸಲುವುದೊ ನನ್ನ ಈ ಆಸೆ!!

ಮೂಡುವೆಳೆ ನೇಸರಿನ
ಮುಳುಗುತಿಹ ಭಾಸ್ಕರನ
ದಿವ್ಯ ಪ್ರಭೆಯಲಿ ಮಿಂದು
ನಿತ್ಯ ಲೀಲೆಯೊಳೈಕ್ಯವಾಗುವಾಸೆ
ಎಂದು ಸಲುವುದೊ ನನ್ನ ಈ ಆಸೆ.

ಎಲ್ಲ ಆಸೆಯ ಆಸೆ
ಆಸೆಗಳ ಕೊನೆಯಗಾಚೆ
ಎಲ್ಲ ಆಸೆಯ ಬಿಡುವುದೆನ್ನಾಸೆ!
ಎಂದು ಹರಿವುದೊ ನನ್ನ ಈ ಪಾಶೆ?

# ಯಾವ ಭಾಷೆಯೋ ಏನೋ!

ಯಾವ ಭಾಷೆಯೊ ಏನೋ ನಿನಾಡುವೀ ಮಾತು
　　ನನಗೊಂದು ತಿಳಿಯದಿದೆ ನನ್ನ ಮಗಳೇ
ಬೇಕು ಬೇಡೆಂಬುವಕೆ ಭೇದವಿಲ್ಲೆಂದಿನಿತು
　　ಎಲ್ಲದಕು 'ಓ' ಎನುವುದೊಂದೆ ರಗಳೇ

ಗುಬ್ಬಿ ಗಿಳಿ ಗೊರವಂಕ ನಾಯಿ ಬೆಕ್ಕುಗಳೊಡನೆ
　　ಏನೇನೋ ನುಡಿಯುತಿಹೆ ಸುರಿದಂತೆ ಸೋನೆ;
ಮೌನದಿಂ ನಿಂತಿರುವ ಹೂಬಳ್ಳಿ ಗಿಡದೊಡನೆ
　　ಮಾತಾಡುವೀ ನಿನ್ನ ನುಡಿಗರ್ಥವೇನೆ?

ಖಗವಾದರೇನಂತೆ? ಮೃಗವಾದರೇನಂತೆ?
　　ಎಲ್ಲರೊಡನಾಡುತಿಹೆ ಗೆಳತಿಯಂತೆ!
ಯಾವ ಜನ್ಮದ ನಂಟೋ ಮಾತನಾಡುತ ನಿಂತೆ
　　ನನಗಿನಿತು ಹೇಳುವೆಯಾ, ನೀ ಲೋಕ ಮಾತೆ

ಬೇಡ ಬೇಕುಗಳಲ್ಲಿ, ಜಡ ಚೇತನಂಗಳಲಿ
　　ಭೇದವೇ ನಿನಗಿಲ್ಲ, ದ್ವಂದ್ವ ದಾಟಿರುವೆ!
ದ್ವಂದ್ವ ದಾಟಿದ ನಿನ್ನ 'ಓ' ಎನುವ ಕೂಗಿನಲಿ
　　ಯಾವ ವೇದಗಳಿಹವೊ ನಾನರಿವೆನೆ?

ಹಗಲು ರಾತ್ರಿಗಳಾಚೆ ಮಾತು ಮೌನಗಳಾಚೆ
ನೀನಿರುವೆ ಪರಿಶುದ್ಧ ಬ್ರಹ್ಮನಂತೆ!
ನೀನಾಡುವೀ ಭಾಷೆ, ದೇವಲೋಕದ ಮಾತೆ
ಜನನರಿಯೆ ಆಗುವುದು ಮೂಕನಂತೆ!!

# ಶಾಂತಿ

"'ಮಾಯೆ' 'ಮುಕ್ತಿ' 'ಬಾಪು' 'ಬುದ್ಧ'
ಎಲ್ಲ ಕುರಿತು ಬರೆದುದಾಯ್ತು,
ನಮ್ಮ ಶಾಂತಿ, ನಲ್ಮೆ ಮುದ್ದು
ಕುರಿತು ಏನು ಬರೆಯಲಿಲ್ಲ!
ಯಾಕೆ ನಿಮಗೆ ಸ್ಫೂರ್ತಿಯಿಲ್ಲ"
ಎಂದು ನನ್ನ ಕೇಳ್ವಳಮ್ಮ
ನಿನ್ನ ಹಡೆದ ಜಾಣೆ
ನನ್ನ ಮಡದಿ; ರಾಣಿ!

ಏನು ಹೇಳಲಮ್ಮ ಶಾಂತಿ
ನಿನ್ನ ತಾಯ ಪ್ರಶ್ನೆಗೆ?
ನನ್ನ ಕಾವ್ಯ ಕನ್ಯೆ ಕಾಂತಿ
ಹೆದರಿತಮ್ಮ ಅವಳಿಗೆ!
ನನ್ನ ಮನದ ರಾಜ್ಯಕೆಲ್ಲ
ನಿನ್ನ ತಾಯೆ ರಾಣಿ
ಎಂತು ನಿಂತಳಮ್ಮ ಅಲ್ಲಿ
ಮುನಿದಳಕ್ತೆ ವಾಣಿ?

ಏನು ಬರೆಯಲಮ್ಮ ನಾನು
ನಿನ್ನ ಕುರಿತು ಶಾಂತಿ?
ಶಾಂತಿ ದೊರೆತ ಮೇಲೆ 'ನಾನು'
ಎಂಬುದೆಲ್ಲ ಭ್ರಾಂತಿ!
ಹೂವ ಕುಡಿವ ಮುಂಚೆ ಜೇನು-
ನೊಳಬ ಝೇಂಕೃತಿ
ಕುಡಿದ ಮೇಲೆ ಉಳಿದುದೇನು:
ಬರಿಯ ಹೃದಯ ತೃಪ್ತಿ!!

ಬೆಂದಲೋಕಕೆದೆಯ ತಂಪ
ಎರೆಯಲೆಂದು ಪರಮ ಹಂಸ
ಲೋಕ ಕೆಲ್ಲ ಬೀರಿಕಂಪ
ಎಂದು ಬಂದರದೇ ದಿವಸ
ನೀನು ಹುಟ್ಟಿ ಬಂದೆ ಮಗಳೆ
ಎನ್ನ ಎದೆಗೆ ಶಾಂತಿ ತಂಪೆ
ನೀನೆ ನನಗೆ ಶಾಂತಿ ದಾತೆ
ಸಕಲ ಸುಖದ ತೌರುಬಂದೆ!

ದೀಪ ಮುಡಿಸಿ ಕೈಯ ಮುಗಿಯೆ
ನೀನು ಪಾದಜೋಡಿಸೀ
ಅಡ್ಡ ಬೀಳಿರೆಂದು ತಾಯಿ
ಸನ್ನೆ ಮಾಡಿ ಕರೆಯುವೆ!

ನಿನ್ನ ಬಾಲ ಲೀಲೆಯೊಳಗೆ
ಅವನ ಗುರುತ ಕಾಣುವೆ
ಭಕ್ತಿಯಿಂದ ಮಣಿಯುವೆ
ಪದದ ಧೂಳಿ ಮುಡಿಯುವೆ!
ಏನು ಬರೆಯಲಮ್ಮ ಮುದ್ದು
ಲೀಲೆ ಮುಗಿಯ ದಾಟವು
ಯಾರಿಗಿಂತ ಮೊದಲೆ ಎದ್ದು
ನಿದ್ದೆ ಮಾಯೆ ದಾಟುವೆ!

ಎಲ್ಲರೂ ಮಲಗಿ ನಿದ್ದೆ-
ಮಾಡುತಿರಲು ಆಡುವೆ!
ಏನು ಬರೆಯಲಮ್ಮ?
ಹೇಗೆ ಬರೆಯಲಮ್ಮ?

## ಎಂಥ ವಿಜಯವೊ, ಇದು ಏನು ವಿಜಯವೊ!

೧

ವಿಜಯ ವಿಜಯ ವಿಜಯವಂತೆ
ನಾಜಿ ಪತನ ವಾಯಿತಂತೆ
ಜಗದ ಸೆರೆಯು ಹರಿಯಿತಂತೆ
ದಾಸ್ಯದಿಂದ ಮುಕ್ತಿಯಂತೆ
ಸತ್ಯವುಳಿದು, ಮಿಥ್ಯೆ ಅಳಿದು
ಜಗಕೆ ಶಾಂತಿ ದೊರೆಯಿತಂತೆ
ಎಂಥ ವಿಜಯವೊ
ಇದು-ಎಂಥ ವಿಜಯವೋ!

೨

ನಾಜಿ ಪ್ರೇತ ದಹನವಿಲ್ಲ
ಅಂತ್ಯ ಕ್ರಿಯೆಯು ಮುಗಿಯಲಿಲ್ಲ;
ನಾಜಿ ಆತ್ಮ ದೇಹ ತಳೆದು
ಜಗದಿ ಜನಿಸಿ ನಿಂದೆಯಿಹುದು
ಬೇರೆ ನಾಮ ರೂಪಹೊಂದಿ!
ವಿಜಯ ವಿಜಯ ವಿಜಯವೆಂದು
ಕಿರಲಿ ಕೂಗಿ ನೆಗೆವುವೊಂದು,
ಎಂಥ ವಿಜಯವೊ
ಇದು-ಎಂಥ ವಿಜಯವೊ!

೩

ಜಗದ ಕುತ್ತ ನಿರಿದು ಕೊಂದು
ಜಗಕೆ ಮುಕ್ತಿ ಇತ್ತೆವೆಂದು,
ನಾಲ್ಕು ಹತ್ತು ಕೋಟಿ ಜನರ
ದೊಡ್ಡದೊಂದು ಸೆರೆಯೊಳಿಟ್ಟು,
'ನಾವು ಜನರ ಮುಕ್ತಿಗಾಗಿ
ಕಾದು ಗೆದ್ದ ಸತ್ಯಸಂಧರ್'
ಎಂದು ಲಜ್ಜೆ ಬಿಟ್ಟು ಕುಣಿವು-
ದೆಂಥ ವಿಜಯವೊ
ಇದು-ಎಂಥ ವಿಜಯವೊ!

೪

ವಿಜಯ ವಿಜಯ ವಿಜಯವೆಂದು
ಗಂಟಲರಿದು ಕೂಗಿ ಕೊಳಲು
ಮಿಥ್ಯೆಯುಳಿದು ಸತ್ಯವುಳಿದ
ಗುರುತು ಎಂದು ಅರಿಯಲರಿದು
ಒಬ್ಬ ಕಳ್ಳನಳಿದು ಮತ್ತೆ
ಒಬ್ಬ ಕಳ್ಳ ಜನಿಸಿದಂತೆ
ಇದಕೆ ವಿಜಯ ವಿಜಯವೆನಲು
ಎಂಥ ವಿಜಯವೋ
ಇದು-ಏನು ವಿಜಯವೋ

೫

ವೇಶ್ಯೆಯೊಬ್ಬಳೋರ್ವ ವಿಟನ
ಎದುರು ಹೆಣ್ಣಿಗೊಲಿಯದಂತೆ
ಹಿಡಿದು ತನ್ನ ಮನೆಯೊಳಿರಿಸಿ
ಅವನೆ ತನ್ನ ಸ್ವಾಮಿಯೆನಲು
ತಾನೆ ಸೀತೆ! ಸಾಧ್ವಿ'ಯೆಂದು
ಪಾತಿವ್ರತ್ಯ ಮೂರ್ತಿ' ಎಂದು
ಕೂಗಿ ಕೊಳುವುದೆಂಥ ಮಾತು

ಅಂಥ ವಿಜಯವೊ
ಇದು-ಅಂಥ ವಿಜಯವೋ!

೬

ಇಂಥ ಆಟ ನಡೆಯದಿನ್ನು
ಸಾಕು ಮೋಸದಾಟವಿನ್ನು!
ನಿಮ್ಮ ನುಡಿಗೆ ಮಾರುಹೋಗಿ
ಭಕ್ತಿಯಿಂದ ತಲೆಯ ಬಾಗಿ
ಮಣಿವ ದಾಸರಲ್ಲ ನಾವು
ಇಂದೋ ನಾಳೆ ನಮ್ಮ ಕಾವು
ತಗುಲಿ ನಿಮ್ಮ ಕೊಬ್ಬು ಕರಗಿ
ಜಗಕೆ ಶಾಂತಿ ದೊರೆವುದಂದೆ

ವಿಜಯ ವಿಜಯವು!
ಮುಕ್ತಿ ಮುಕ್ತಿಯು!!

# ಸಿರಿವಂತರ ಗೋರಿಗೆ

ಬರುತಿದೆ ಓಹೋ! ಬರುತಿದೆ ಬಿರುಗಾಳಿ!!
ಹಸಿದವ ನೊಡಲಿನ ಬೆಂಕಿಯು ದಾಳಿ!

ಭೂಮಿಗು ಗಗನಕು ಒಂದೇ ಊಗಿ,
ರಕ್ತದ ರೋಮದ ಕೆಂಜೆಡೆ ಕೆದರಿ,
ನೆತ್ತರು ಸೊಗೆಯುವ ಕತ್ತಿಯು ಧರಿಸಿ
ಜಗವನೆ ಜಲಧಿಯೊಳದ್ದಿದ ತೆರದಿ
ಪಾತಾಳದ ಎದೆಯಲಿ ಡಮರುಗ ಬಡಿದು
ಸಮುದ್ರದೊಡಲಿನ ಆರ್ಭಟ ಹೋಲಿ
ಬರುತಿದೆ ಒಡಲಿನ ಬೆಂಕಿಯ ದಾಳಿ!
ಓಹೋ ಬರುತಿದೆ....

ಭೋರ್ಗರೆಯುವ ಬೆಂಕಿಯು ರಭಸವು
ಬೆಟ್ಟಗಳುಕ್ಕಿನ ಪರ್ವತ ಕರಗಿಸಿ!
ಜಲನಿಧಿ ನದಿಗಳ ಬೋರಲು ಹಾಕಿ!
ಕಾನನ ಹೊಲ, ವನ, ಲೋಕವ ಸೀಡು!
ಲೋಕದ ಬುಡವನೆ ಹಿಡಿದಲ್ಲಾಡಿಸಿ,
ರವಿಶಶಿತಾರೆಯು ಗಡಗಡ ನಡುಗಿಸಿ!
ಬರುತಿದೆ ರಕ್ತವ ಚಿಮ್ಮುತ ಬೀಸಿ!
ಓಹೋ ಬರುತಿದೆ....

ಕುತ್ತಿಗೆ ತಿರುಗದ ಕೊಬ್ಬಿದ ಧನಿಕರ
ಕತ್ತನೆ ಮುರಿದೂ, ಕೊಬ್ಬನೆ ಕಿತ್ತು:
ದುಡ್ಡಿನ ಮದದಿಂ ನೆತ್ತಿಗೆ ಏರಿದ
ಕಣ್ಗಳ ಕಿತ್ತು, ನೆತ್ತಿಯು ಸಿಗಿದು;
ಬಡವರ ರಕ್ತವ ಹೀರಿದ ಹೊಟ್ಟೆಯ
ಕರುಳನೆ ಬಗೆದು ರಕ್ತವ ಚೆಲ್ಲಿ
ಬರುತಿದೆ ಭೀಕರ ಹೆಜ್ಜೆಯನಿಟ್ಟು
ಓಹೋ ಬರುತಿದೆ....

ಇದಿರಹ ಪರ್ವತ ಕಾನನ ಸೀಳು
ಬರುತಿಹ ಪ್ರಳಯದ ಉಲ್ಕೆಗೆದುರು
ನಿಲ್ವುದೆ ಧನಿಕರ ರೇಶ್ಮೆಯ ಪಾಗು?
ರಾಜರ ಮುತ್ತಿನ ಗೊಂಡೆಯ ಜೋಲು?
ಸವರುವುದೆಲ್ಲರ ನುಣ್ಣಗೆ ಜಡಿದು!
ನಿಲ್ಲದಿರೆದುರಿಗೆ ಬರುತಿದೆ ಕೊಚ್ಚಿ
ಸಿರಿವಂತರ ಗೋರಿಗೆ ಮಣ್ಣನು ಮುಚ್ಚಿ!
ಓಹೋ ಬರುತಿದೆ....

# ಸ್ಮಶಾನ ಯಾತ್ರೆ

ಕೃಷ್ಣ ಪಕ್ಷದ ರಾತ್ರಿ: ಅಮಾವಾಸ್ಯೆಗಿನ್ನೆರಡು
ದಿನಗಳಿದ್ದ ರಾತ್ರಿ; ರಾತ್ರಿ ರಮಣಿಯು ಸತ್ತು
ಇನಿಯನ ಪ್ರಗುವಿಕೆಗೆ ತನ್ನ ಕಾಂತಿಯನೆಲ್ಲ
ಚೆಲ್ಲಿದಂತಿರ್ದಿತ್ತು: ನಕ್ಷತ್ರ ಖಚಿತವಾಗಗನಂ;
ಕಾಡಿಗೆಯ ಕಲ್ಲಿನಿಂ ಗೋಡೆ ಇಟ್ಟಂತಿತ್ತು
ಆ ರಾತ್ರಿ ಕತ್ತಲ್—ಇಂತಿರ್ದ ರಾತ್ರಿಯೊಳು
ಪಕ್ಷಿಗಳು ಶೋಕದಿಂ ಮೌನವಾಗಿರುವಂತೆ
ಬರುತಿರ್ದಿತಲ್ಲೊಂದು ಜನಸ್ತೋಮ—ಚಲಿಸುತಿಹ
ಸಾಗರದ ತೆರನಿರ್ದಿತಾಸ್ತೋಮ! ಚಲಿಸದೆಯೆ
ನಿಂತಿರುವ ವೃಕ್ಷಗಳ ನಡುನಡುವೆ ಬೆಳೆದಿರುವ
ತೆಂಗಿನೊಲು ಪಿಡಿದಿರ್ದರೊಂದೊಂದು ಪಕ್ಕೆಗಳ-
ನಲ್ಲಲ್ಲಿ! ಆ ಜನರ ಮಧ್ಯದಲಿ ನಾಲ್ಕು ಭುಜಗಳ
ಮೇಲೆ ಬರುತಿರ್ದಿತಲ್ಲೊಂದು ಶೃಂಗಾರ ಗೈದ ಶವ!
ನೋಡುವೊಡೆ ಅವನೆ ಪರ್ವ ಬಾಳಿಬೆಳಿವವನಿಂದು
ಎದ್ದು ಕಾಣುತಲಿತ್ತು, ಮುಚ್ಚಿದಾ ಬಟ್ಟೆಯಿಂ;
ಅಗಣಿತಾಶ್ರಿತರ ಪಡೆದಿರ್ದನಹುದೆಂದು
ಪ್ರಕಟಿಸಿತು ಹಿಂದಿರ್ದ ಜನಸ್ತೋಮ! ಮಡಿದವನ
ನೆನೆ ನೆನೆದು ಶೋಕಗೈಯ್ಯುತಲಿತ್ತು ಕೆಲವಂದಿ
ಅಪರೊಳಗೆ!

ಆದರೆ ಎನಿತು ಪೊಸತು ಕೆಲರು ನಗು-
ತಿರುವರೊಳ್: ಅವರೆಲ್ಲ ಕಿರಿಯವರ್—ಕಿರಿಯಿಂ-
ದಿನದಿಂದಲ್ತು! ರಾಕ್ಷಸನು ತನ್ನೊರ್ವ ಒಡಲ
ಪೊರೆಯಲಿಕೆಂದು ಕಂಡವರ ದೋಚುತ್ತ, ಸುಲಿಗೆಯನು
ಗೈಯುತ್ತ, ಮಾನವರ ತಿಂದುಂಡು ತೇಗುತ್ತ ವಿಹರಿಸಿ,

ಲೀಲೆಯೊಳ್ ಮೆರೆಯುತಿಹನವನೋರ್ವನುಳಿ
ದರೆ ಮಾನವರು ನಲಿದಂತೆ ನಗುತಿರ್ದರವ-
ರೊಳಗೆ ಕೆಲರು!

ಅಸ್ಥಿ ಪಂಜರ ಒಂದೆ ನಿಂತ
ಮುದುಕನು ಒರ್ವ: ಗಾಳಿಯಿಂದಲೆ ಬೆಳೆದು
ಗಾಳಿಯಿಂದಲೆ ಬಾಳಿ, ಆಹಾರ ಕಾಣದವ
ಹಣ್ಣು ಮುದುಕನು ಓರ್ವ ಬಡಿಗೆಯೊಂದನು ನೆಮ್ಮಿ
ಮುರಿದ ಸೊಂಟದಿನಿಂತು, ಕೇಳಿದನು ಇಂತು:
'ಯಾರ ಯಾತ್ರೆಯೊ ಇಂತು ರಮಣೀಯವಾಗಿಹುದು?
ಜನರೇಕೆ ನಲಿಯುವರು? ಯಾರ ಯಾತ್ರೆಯೊ ಯುವಕ?'
ಅವ ಪೇಳ್ದನೊಲವಿಂ: 'ಸಾಮ್ರಾಜ್ಯವಾದದಾ
ಶವದ ಯಾತ್ರೆಯು ತಾತ, ಭಾಗಿಯಾಗಲು ಇದರೊಳ್
ರಾಗಮುಳ್ಳೊಡೆ ಬನ್ನಿ. ನೋಡಲಿಕೆ ಕಂಗಳಿಗೆ
ಹಬ್ಬವಾಗಿರುತಿಹುದು.'' ಮುರಿದ ಸೊಂಟದ
ಮುದುಕ, ಬಡಿಗೆಯನು ಬಿಸುಟಿದನು ಕಲ್ಲುಕಂಬದ
ತೆರದಿ ನೆಟ್ಟಗಾದನು ತಾತ; ಹರ್ಷದಿಂ ವದನವದು
ವಿಕಸಿಸಿತು! ಪೇಳಿದನು ಪ್ರೀತಿಯಲಿ ನಸುನಕ್ಕು:
"ಘೋರಶವವನ್ನು ಆಳವಾದೊಂದು ಕುಣಿ-
ಯೊಳ್! ಮರಳಿ ಏಳಲಿಕದಕೆ ಎಂದುವಾಗದ
ತೆರದಿ ನೂರಾರು ಮಟ್ಟದಾ ಕುಣಿಯೊಳಗೆ;
ಹೂಳಿಬಿಡಿ! ಹೂಳಿಬಿಡಿ! ಬಹು ಆಳ ಬಹು ಆಳ''
ಇಂತು ನುಡಿದಾ ಮುದುಕ ಮುಂದೆ ಸಾಗಿದನು,
ಶವ ಸಹಿತ ಈ ಸ್ತೋಮ ಇತ್ತ ಸಾಗಿದುದು!
ಇಕ್ಕೆಲದ ಬೀದಿ ಜನ ಹರ್ಷದಿಂ ಕರತಟ್ಟಿ
ಘೋಷಿಳೆಯುಗರೆದರತಿ ಹಿತದಿ, ಸಂತಸದಿ!
ಸಾಗಿದುದು ಶವವಂದು ಮುಳದಿರಲ್ಕೆಂದು.

# ಎಚ್ಚರಿಕೆ

ನಾವು ರಾಜರೆ ನಿಜದಿ
ತೊಳಲಿದರು ದಾಸ್ಯದಲಿ
ನಮಗೆ ಒರೆದೋರೆ ಯಾರು ಬಡತನದೀ ರಾಜ್ಯದಲಿ?
ಈ ರಾಜ್ಯದೊಡೆತನವು
ಸಂಪೂರ್ಣ ಎಮ್ಮದದು
ಬರಿಯ ಬೊಕ್ಕಸಕಾನು ಮುಕುಟವಿಲ್ಲದ ರಾಜ ತಿಳಿದಿರಲಿ!

ಬರಿಯ ರಾಜರೆ ನಾವು?
ನಿಮಗಾಗಲೇ ನೋವು
ನಾವು ಯೋಗಿಶ್ವರರು ಎಂಬುದನು ಕೇಳಿದೊಡೆ!
ಏಕೆಂದರಿಂದ ಕೇಳಿ:
ನಮಗಿಹುದದೇಂ ಪೇಳಿ?
ಕಾಮಿನೀ ಕಾಂಚನವು ತಾವಾಗಿ ತೊರೆಯುವೊಡೆ!!

ಎನಿತೊ ಯೋಗೀಶ್ವರರು
ಸಾಧನೆಯ ಗೈಯ್ದಿಹರು
ಈ ಸಿದ್ಧಿ ಪಡೆಯಲಿಕೆ ಎನಿತೆನಿತೊ ಕಾಲಂ!
ಆದೊಡೆಮ್ಮನು ನೋಡಿ
ಹುಟ್ಟಿನಿಂದಲೆ ಕೂಡಿ
ಬಂದಿಹುದು ಈ ಪದವಿ!! ಅವರಿಗಿಂ ನಾವ್ ಮಿಗಿಲು!!

ನಿರ್ಲಿಪ್ತರೂ ನಾವು
ನಮಗಿಲ್ಲ ಬಂಧನವು
ಕಾಮಕ್ರೋಧಗಳೆಂಬುವಿನಿತಿಲ್ಲ ಬಾಳಿನಲಿ!
'ಭಿಕ್ಷೆಯಿಕ್ಕುವರಾವು
ಭಿಕ್ಷಾನ್ನ ತಿನ್ನುವರು'
ಎಂದು ಮುಖದೊಳು ನುಡಿಯೆ ಸಹಿಸುವೆವು ಶಾಂತಿಯಲಿ!

ಈಗಳುಂ ನಾವಾರು
ಎಂಬುದಂ ಅರಿತಿಹಿರೊ?
ಜಗದೊಳಿಹ ಹಿರಿತನದ ಪ್ರತಿನಿಧಿಗಳಾವು!!
ಅದರಿಂದ ಕೆಣಕದಿರಿ
ನಮ್ಮವರ ಉರಿಸದೀ!
ಕೋಟಿ ಯುಗಗಳ ತಪದಿ ಸುಟ್ಟು ಬಿಡುವೆವುನಾವು!!

ಪ್ರಲಯದುಲ್ಕಲೆಯಂತೆ
ನಮ್ಮ ತಪದುರಿಯಂತೆ!!
ಸಾಟಿ ಗೀಟಿಯೆ ಇಲ್ಲ ಮೂರು ಲೋಕದೊಳದಕೆ!!
ಇಂದ್ರಗಿಂದ್ರರು ಎಲ್ಲ
ನವನಿಧಿಯ ಒಡೆಯರುಂ
ಸಿದ್ಧರಾಗಿರಿ ಬರುವ ಜ್ವಾಲೆಯನು ಅಪ್ಪಲಿಕೆ!!

# ಇಕ್ಕುವಂ ನವ್ಮೊಡಲ ಕೊಳ್ಳಿ

ನೆರವೀಯುರೆವುಗಿಲ್ಲಿ
ದಯೆ ತೋರರವರಲ್ಲಿ
ಧನಿಕರೊಲವಿನ ತೆರದಿ ಸಾಗುತಿದೆ ಎಲ್ಲ!
ನಮ್ಮ ಗತಿ ನಮಗಾಗಿ
ಮನದೊಳಗೆ ಮರುಮರುಗಿ
ಅಳಿಯುವುದೆ ನಮಗೆಲ್ಲ ಬಂದುದೆಲ್ಲ!!

ಬಲ್ಲವರು ದೊಡ್ಡವರು
ಬಲ್ಲಿದರು ಕೆಟ್ಟವರು
ನಾವೆಲ್ಲಿ ಬದುಕುವುದು ಸುಡುಗಾಡಿನಲ್ಲಿ!
ಇಲ್ಲಿರುವ ಸ್ವಾಮಿಗಳು
ಧನವಂತರಾಳುಗಳು
ಅಲ್ಲಿರುವ ದೇವನನು ಕಾಣೆ ಕಣ್ಣಿಲ್ಲ!

ಹಿಡಿ ಅಶನ ಒಡಲಿಂಗೆ
ಇಲ್ಲಿದೆಯೆ ಕೂರಸಿಗೆ
ಸಿಕ್ಕು ಹುಡಿಯಾಗುತಿರೆ ನುಡಿಸುವವರಿಲ್ಲ
ಎಲ್ಲರಿಗು ಕಾಣುವುದು
ನೀರೊಳಗೆ ಮುಳುಗುವುದು
ಅಯ್ಯೊ ಪಾಪ ಎಂದು ನುಡಿಸುವವರಿಲ್ಲ

ನಾವು ಪಾಪಿಗಳಂತೆ
ಅದಕೆ ಈ ಗೋಳಂತೆ
ಇವಕೆಲ್ಲ ಕಾರಣವು ಕರ್ಮವಂತೆ
ಮರ್ಮವನು ಬಲ್ಲವರು
ಸುಲಿಗೆಯಲಿ ನುರಿತವರು
ನಮ್ಮ ಹಸಿವೆಗೆ ಕೊಟ್ಟ ಮದ್ದಿದಲ್ತೆ?

ಅದಕಾಗಿ ನಾವಿಂದು
ಒಂದೆಡೆಗೆ ನೆಲೆನಿಂದು
ಪಾಪ ಪುಣ್ಯಗಳೆಲ್ಲ ಒಂದೆಡೆಗೆ ತಳ್ಳಿ
ನೆರವೀಯುದವರಿರಲಿ
ದಯೆ ತೋರದವರಿರಲಿ
ಎಲ್ಲರಿಗು ಇಕ್ಯವಂ ನಮ್ಮೊಡಲ ಕೊಳ್ಳಿ!

ಕರ್ಮ ಗಿರ್ಮದ ಜಾಲ
ತಡೆಯಲಾರದ ಕಾಲ
ಬಡತನದ ಭೀಕರದ ಹೊನಲಿನಲ್ಲಿ!
ಶತಶತಾಬ್ದಗಳಿಂದ
ನಮ್ಮ ಕಣ್ಣುಗಳಿಂದ
ಬಿದ್ದನೀರ್ ಪರಿಯುತಿದೆ ಈ ರೂಪದಲ್ಲಿ!!

ಪಾಪಿಗಳು ನಾವೆಂದು
ನೋಡಬಾರದು ಎಂದು
ತಾನಾಗಿ ಕಣ್ಣುಗಳನಿರಿದು ಕೊಂಡವರು
ಎಲ್ಲರೂ ಪ್ರಲಯದಲಿ
ಬಡ ಬಾಳಿನುರಿಯಲ್ಲಿ
ಸೀದು ಸ್ವರ್ಗವಸೇರಿ ಮುಕ್ತಿ ಹೊಂದುವರು!!

# ಓ ಏಳಿ! ಎದ್ದೇಳಿ! ಬನ್ನಿ ಮಾಡುವ ದಾಳಿ!!

ಸಿರಿಲತೆಯು ನಿಡು ಬೆಳಗೆ
ನಮ್ಮ ದುಃಖಾಶ್ರುಗಳ
ಸುರಿದು ಇಂಗಿದುದೆಮ್ಮ ಕಣ್ಣೀರಿನೊರತೆ!
ಕಣ್ಣುಗಳು ಗುಳಿಬಿದ್ದು
ಮಸಣದಿಂ ನಾವೆದ್ದು
ಬಂದು ನಿಂತಿರುವೆವಾವ್ ಛಾಯೆಯಂತೆ!!

ತಂಪಾಗಲಿಲ್ಲಿನಿತು
ಸಿರಿಲತೆಯು ಹಿರಿಪಾತೆ
ನಮ್ಮ ರಕ್ತವನೆಲ್ಲ ಸುರಿಯ ಬೇಕಾಯ್ತು!
ಎಲುವು ತೊವಲೆರಡನ್ನು
ಬಿಟ್ಟು ಮಿಕ್ಕುದುದನ್ನು
ಸೇಳಿಯಿತೀ ಲತೆಗಾಗಿ ಸಾಯಬೇಕಾಯ್ತು!

ಮಾನ ಮರ್ಯಾದೆಯನು,
ಲಜ್ಜೆ ನಯಶೀಲವನು
ಲೋಕದಭಿಮತಕೆಲ್ಲ ಹುಟ್ಟು ಕುರುಡಾಗಿ
ಒಂದಿನಿತು ಲಕ್ಷಿಸದೆ
ಧನಿಕರೆನ್ನುವ ಹದ್ದು
ಅಸುವುಳ್ಳೊಡಂ ಕೂಡ ಕೂಡುತಿದೆ ಮೇಲೆರಗಿ!!

ಕಣ್ಣೀರು ಹರಿಹರಿದು
ಕಣ್ಣುಗಳು ಗುಳಿಬಿದ್ದು
ಮಾಂಸ ರಕ್ತವನೆಲ್ಲ ನಿಮಗೆ ಬಲಿಮಾಡಿ
ಓಡಾಡಲಳವಿಲ್ಲದೆ
ಬಿದ್ದು ಕೊಂಡಿರುವೊಡೆ
ಕೊಲ್ಲಲೆಂದೆರಗುವುದೆ ನರಮಾಂಸ ಭಕ್ಷಕರೆ?

ಹಗಲಿರುಳು ದುಡಿದು ನಾವ್
ಹಿಡಿ ಅಶನ ಕಾಣದೆಯೆ
ಹುಡಿ ಸೂಗುತಿರುವಾಗ ನಮ್ಮ ದುರ್ದಶೆ ಕಂಡು
"ಇದಕೆ ಪೂರ್ವದ ಕರ್ಮ!
ಕರ್ಮಕ್ಕೆ ತಕ್ಕ ಫಲ!!
ಅನುಭವಿಸಬೇಕಾಯ್ತು" ನುಡಿದರೀ ಜಾಣರ್!!

ಸಾಕು ನಿಲ್ಲಿಸಿ ನಿಮ್ಮ
ನೀರಸಾಲಾಪಮಂ
ಸವಿಯೆಂದು ಸಕ್ಕರೆಯು ನಮ್ಮ ಎಲುವಿನ ಪುಡಿಯು
ಕಣ್ಣೀರ ತುಪ್ಪದಲಿ
ಸವಿದಿರಿಲ್ಲಿಯವರೆಗೆ
ಕಕ್ಕಿಸುವೆವೀಗ ತಿಂದುದರ ನೂರ್ ಮಡಿಯು!!

ಬೇಡುಗೀಡುವುದೆಲ್ಲ
ನಮಗೀಗ ಬೇಕಿಲ್ಲ!
ನಮ್ಮ ಹಸಿವೆಯು ಉರಿಯು ನಿಟ್ಟುಸಿರ ಗಾಳಿಯಿಂ
ಬೀಸಿ ನಿಮ್ಮಯ ಮನೆಗೆ
ಬೆಂಕಿಯಿಟ್ಟುರಿಸುವೆವು
ಮಡದಿ ಮಕ್ಕಳನೆಲ್ಲ ಒಂದೆ ಚಿತೆಯಲ್ಲಿ!

ನಿಮ್ಮ ಕುಲವಳಿಯುವುದೆ?
ನಿಮ್ಮಾಟ ನಡೆಯುವುದೆ?
ಬರುವ ಕಾಲವು ನಮ್ಮದೆಮ್ಮಾಟ ಸೊಗವು!
ನಿಮ್ಮ ದುಷ್ಕೃತ್ಯಗಳು
ಬತ್ತಲೆಯೊಳಿರುತಿಹವು
ಆದರಿಂದ ಬಚ್ಚು ನುಡಿ! ಬೆಚ್ಚುವೆವೆ ನಾವು!!

ಓ ಏಳಿ! ಎದ್ದೇಳಿ!!
ಬನ್ನಿ ಮಾಡುವ ದಾಳಿ!
ವೈರಿ ರಕ್ತವ ಚೆಲ್ಲಿ, ರಕ್ತದೋಕುಳಿ ಮಾಡಿ!
ಕ್ರಾಂತಿ ದೇವಿಯು ನಿಲಿಸಿ
ಆರತಿಯು ಬೆಳಗುವಂ!
ಓ! ಏಳಿ! ಎದ್ದೇಳಿ! ಮುಂದೆ ಸಾಗುವ ಕೂಡಿ!!

---

# ಕೋ. ಚೆನ್ನಬಸಪ್ಪನವರ
## ಇತರ ಕೃತಿಗಳು

| | |
|---|---|
| ಶ್ರೀ ಕುವೆಂಪು ಸಂದರ್ಶನ (ಸಂಪಾದಿತ) | ರೂ. ೧-೧೨-೦ |
| ಸ್ವಾಮಿಜಿಯ ಪತ್ರಗಳು | ೧-೮-೦ |
| ಗಡೀಪಾರು-(ಕಥಾ ಸಂಗ್ರಹ) | ೧-೪-೦ |
| ಭಾರತೀಯ ಘಟನೆ | ೦ ೧೨-೦ |
| ಪ್ರಾಣಪಕ್ಷಿ (ಕವನ ಸಂಗ್ರಹ) | ೧-೦-೦ |

## ಬರಲಿರುವ ಕೃತಿಗಳು

ಸ್ವರ್ಣ ದ್ವೀಪ ಮತ್ತು ಇತರ ಕಥೆಗಳು
ದಿವಾನ್ ಬಹದ್ದೂರ್ (ನಾಲ್ಕು ಅಂಕದ ನಾಟಕ)
ಶ್ರೀ ವೈ. ನಾಗೇಶ ಶಾಸ್ತ್ರಿಗಳು (ಜೀವನ ಚರಿತ್ರೆ)



## ಶ್ರೀ ಕೋ. ಚೆನ್ನಬಸಪ್ಪ

ಬಳ್ಳಾರಿ ಜಿಲ್ಲೆಯ ಕೂಡಲಿಗೆ ತಾಲ್ಲೂಕಿನ ಆಲೂರಿನವರು. ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೆ 1942 ರಲ್ಲಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ಹೋರಾಡಿದರು. ಈಗ ಬಳ್ಳಾರಿಯಲ್ಲಿ ವಕೀಲರಾಗಿದ್ದಾರೆ. ವಕೀಲಿ ಮುಖ್ಯ ವೃತ್ತಿಯಾದರೂ ಅನೇಕ ಉಪವೃತ್ತಿಗಳು-ಹೊಟ್ಟೆಪಾಡಿನ ವೃತ್ತಿಗಳಲ್ಲ-ಅವರನ್ನು ಮುತ್ತಿಕೊಂಡಿವೆ. 'ರೈತ' ಎಂಬ ವಾರ ಪತ್ರಿಕೆಯನ್ನು ಸ್ಥಾಪಿಸಿ, ಅದರ ಸಂಪಾದಕರಾಗಿದ್ದು ಅದನ್ನು ಯಶಸ್ವಿಯಾಗಿ ನಡಸಿಕೊಂಡು ಬರುತ್ತಿದ್ದಾರೆ. ಕರ್ಣಾಟಕ ಏಕೀಕರಣಕ್ಕಾಗಿ ತುಂಬ ಶ್ರಮಿಸುತ್ತಿದ್ದಾರೆ. ಬಳ್ಳಾರಿ ಜಿಲ್ಲೆಯ ವಯಸ್ಕರ ಶಿಕ್ಷಣ ಸಮಿತಿಯ ಗೌರವ ಕಾರ್ಯದರ್ಶಿಯಾಗಿ ಶ್ರದ್ಧಾನಿಷ್ಠೆಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ. ಇವೆಲ್ಲಕ್ಕೂ ಮಿಗಿಲಾಗಿ ಅವರು ಸಾಹಿತಿಗಳು. ಈಗಾಗಲೇ ಅವರ 'ಗಡೀಪಾರು' ಎಂಬ ಸಣ್ಣ ಕತೆಗಳ ಸಂಕಲನವೂ, 'ಸ್ವಾಮೀಜೀಯ ಪತ್ರಗಳು' ಎಂಬ ಗ್ರಂಥವೂ ಜನಪ್ರಿಯವಾಗಿವೆ. ಭಾರತ ರಾಜ್ಯಾಂಗವನ್ನು ಕುರಿತ 'ಭಾರತೀಯಘಟನೆ' ಎಲ್ಲರೂ ಓದಬೇಕಾದ್ದು. ಇವರ ಸಂಪಾದಕತ್ವದಲ್ಲಿ ಪ್ರಕಟವಾಗಿರುವ ಶ್ರೀ "ಕುವೆಂಪು ಸಂದರ್ಶನ"ವು ಶ್ರೀ ರಾಮಾಯಣ ದರ್ಶನ ಕಾವ್ಯಾಭ್ಯಾಸಕ್ಕೆ ಕೈಗನ್ನಡಿಯಾಗಿದೆ. ಇದೀಗ ತಾನೆ 'ಪ್ರಾಣಪಕ್ಷಿ' ಯನ್ನು ಸಹೃದಯರ ಮಡಿಲಿಗೆ ಹಾಕಿದ್ದಾರೆ.